ಉಪನ್ಯಾಸ ಗ್ರಂಥಮಾಲೆ

೩೩೭

# ಶರಣರ ಆರ್ಥಿಕ ಚಿಂತನೆ

ಬಿ. ಎ. ಪಾಟೀಲ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಮಾರ್ಚ, ೧೯೮೩

ಉಪನ್ಯಾಸ ಗ್ರಂಥಮಾಲೆ

೩೩೭

# ಶರಣರ ಆರ್ಥಿಕ ಚಿಂತನೆ

ಶ್ರೀ ಬಿ. ಎ. ಪಾಟೀಲ




ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೮೩

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು, ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ,ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ, ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರದ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ

ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವ ದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೩೬ ಪುಸ್ತಕಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿ ರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ, ವ್ಯಕ್ತಗೊಳಿಸುತ್ತದೆ, ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋ ಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

**ಕರ್ನಾಟಕ ವಿಶ್ವವಿದ್ಯಾಲಯ** **ಡಿ.ಎಂ. ನಂಜುಂಡಪ್ಪ**
ಧಾರವಾಡ ಕುಲಪತಿಗಳು

# ನನ್ನ ನುಡಿ

ದಿನಾಂಕ ೨೮ನೆಯ ಅಕ್ಟೋಬರ, ೧೯೭೯ ರಂದು ಕನ್ನಡ ಗಡಿನಾಡಾದ ಅಕ್ಕಲಕೋಟ ತಾಲೂಕಿನ ಮೈಂದರಗಿ ಗ್ರಾಮ ದಲ್ಲಿ ನೀಡಿದ ಉಪನ್ಯಾಸದ ಲಿಖಿತ ರೂಪವೇ ಈ ಪುಸ್ತಿಕೆ. ಹಲ ವಾರು ವರುಷಗಳಿಂದ ನಾನು ಶಿವಶರಣರ ವಚನಗಳನ್ನು ವಿಭಿನ್ನ ದೃಷ್ಟಿಕೋನಗಳಿಂದ ಅಭ್ಯಾಸ ಮಾಡುತ್ತ ಬಂದಿದ್ದೇನೆ. ಶರಣರ ಆರ್ಥಿಕ ಚಿಂತನೆ ಬರಿಯ ಲೌಕಿಕ ಜೀವನಕ್ಕೆ ಅಷ್ಟೇ ಅಲ್ಲ, ಮಾನ ವನ ಹೃದಯ ವಿಕಾಸಕ್ಕೂ ಹಾಗೂ ಅವನ ಪರಿಪೂರ್ಣ ಜೀವ ನಕ್ಕೂ ಬೆಳಕು ಬೀರುವಂತಹದು– ಎಂಬ ಗಾಢವಾದ ವಿಚಾರ ನನ್ನಲ್ಲಿ ಮೂಡಿ ಬಂದಿತು. ಇದೇ ವಿಷಯ ಕುರಿತು ನಾನು ಮಾತನಾಡಬೇಕೆಂದು ಇಚ್ಛಿಸಿದಾಗ ನಿರ್ದೇಶಕರಾದ ಶ್ರೀ ಚೆನ್ನವೀರ ಕಣವಿ ಅವರು, ವಿಶ್ವವಿದ್ಯಾಲಯದ ಪ್ರಸಾರೋ ಪನ್ಯಾಸಮಾಲೆಯಲ್ಲಿ ಇದಕ್ಕೆ ಅನುವು ಮಾಡಿಕೊಟ್ಟರು. ಮತ್ತು ಉಪನ್ಯಾಸ ಪುಸ್ತಿಕೆ ರೂಪದಲ್ಲಿ ಹೊರಬರಲು ಕಾರಣರಾದರು, ಅದಕ್ಕಾಗಿ ಅವರಿಗೆ ನಾನು ಋಣಿ. ಸಹಾಯಕ ನಿರ್ದೇಶಕರಾದ ಶ್ರೀ ಎಲ್ ಎಂ. ಗುಡ್ಡೀನ ಅವರಿಗೂ ನನ್ನ ಕೃತಜ್ಞತೆಗಳು.

ಪ್ರಸ್ತುತ ಪುಸ್ತಿಕೆಯ ವಿಷಯ ನಿರೂಪಣೆಯಲ್ಲಿ ಸೂಕ್ತ ಸಲಹೆಗಳನ್ನು ನೀಡಿದ ಆತ್ಮೀಯ ಹಿರಿಯರು ಹಾಗೂ ಸಹೋ

ದ್ಯೋಗಿಗಳಾದ ಶ್ರೀ ಪಿ. ವ್ಹಿ. ಮಲ್ಲಾಪುರ ಮತ್ತು ಶ್ರೀ ಎಸ್. ಎಸ್. ಪಾಟೀಲ ಇವರಿಗೆ ನನ್ನ ನಮನ– ನೆನಕೆಗಳು.

ಬಿ. ಎ.ಪಾಟೀಲ

ಅರ್ಥಶಾಸ್ತ್ರ ವಿಭಾಗ,
ಶ್ರೀ ಶರಣ ಬಸವೇಶ್ವರ ಕಲಾ ಮಹಾ
ವಿದ್ಯಾಲಯ, ಕಲಬುರ್ಗಿ

# ವಿಷಯ ಸೂಚಿ

# ಪೀಠಿಕೆ

ಸುಮಾರು ಎಂಟು ನೂರು ವರುಷಗಳ ಹಿಂದಿನ ಮಾತು. ಕರ್ನಾಟಕದಲ್ಲಿ ಕಲ್ಯಾಣ (ಈಗಿನ ಬಸವಕಲ್ಯಾಣ)ವನ್ನು ಚಾಲುಕ್ಯ ಅರಸರು ಆಳುತ್ತಿದ್ದ ಕಾಲವದು. ಆ ಕಾಲದಲ್ಲಿ ಬಾಳಿ ಬದುಕಿದ ಶರಣಶರಣೆಯುರ ವಚನಗಳನ್ನು ಹಾಗೂ ಇತಿಹಾಸದ ಪುಟಗಳನ್ನು ಅವಲೋಕಿಸಿದಾಗ ಅಂದಿನ ಜನ ಜೀವನದ ಸ್ಥಿತಿಗತಿಗಳ ಬಗೆಗೆ ನಮಗೆ ತಿಳಿಯದಿರದು. 'ರಾಜನು ಪ್ರತ್ಯಕ್ಷ ದೇವ'ನೆಂದು ನಂಬಿ ಆಳರಸನ ಚಿತ್ತವೇ ಚಿತ್ತ, ಅವನ ಮಾತೇ ಶಾಸನ; ಅದಕ್ಕೆ ಪ್ರತಿಯಿಲ್ಲವೆಂದು ಜನಕೋಟಿ ಬಾಳು ತ್ತಿದ್ದ ಕಾಲವದು; 'ಭಕ್ತರನ್ನು ಕಂಡಡೆ ಬೋಳಾಗಿ, ಸವಣರ ಕಂಡಡೆ ಬತ್ತಲೆಯಾಗಿ. ಹಾರುವರ ಕಂಡಡೆ ಹರಿನಾಮವೆಂದು, ಅವರವರ ಕಂಡಡೆ ಅವರವರಂತೆ ನಟಿಸಿ ಜನರು 'ಧರ್ಮ ಹಾದರ'ವನ್ನಾಡುತ್ತಿದ್ದ ಕಾಲವದು; ಗುಡಿಗುಂಡಾರಗಳಲ್ಲಿ 'ಲೋಕದ' ಭಕ್ತರ ಪರವಾಗಿ ಅರ್ಚನೆ ಪ್ರಾರ್ಥನೆಗಳನ್ನು ಸಲ್ಲಿಸಿ ತನ್ಮೂಲಕ ದೇವಕೃಪೆಯನ್ನು ಅವರಿಗೆ ದೊರಕಿಸಿಕೊಡುವ ಗುರುತರ ಕೆಲಸದ ಗುತ್ತಿಗೆಯನ್ನು ಹೊತ್ತು ದೇವದೂತ (ಧೂರ್ತ)ರಾಗಿ ಪುರೋಹಿತವರ್ಗದವರು ಧರ್ಮದ ಹೆಸರಲ್ಲಿ ಮುಗ್ಧ ಜನರನ್ನು ವಂಚಿಸಿ ಶೋಷಿಸುತ್ತಿದ್ದ ಕಾಲವದು; 'ಮಡಕೆ, ಮೊರ, ಬೀದಿಯ ಕಲ್ಲು, ಕಾಳಯ್ಯ, ದೂಳಯ್ಯ'

ಮುಂತಾದ ಆವಾಗಳೂ ಲೋಗರ ತಿರಿದುಂಬ ನೂರೆಂಟು ದೈವಂಗಳಿಗೆ ಕೀಳುಕಾಮಿತಫಲ ಪ್ರಾಪ್ತಿಯಾಗಿ 'ಕರೆವೆಮ್ಮೆ', ಹಸುಗೂಸು, ಬಸುರಿ, ಬಾಣತಿ, ಕುಮಾರಿ, ಕೊಡಗೂಸು ಗಳನ್ನು ನಿಷ್ಕರುಣೆಯಿಂದ ಅಮಾನುಷ ರೀತಿಯಲ್ಲಿ ಬಲಿಕೊಡು ತ್ತಿದ್ದ ರಾಕ್ಷಸೀ ಪ್ರವೃತ್ತಿಯ ಜನ ಬದುಕಿದ್ದ ಕಾಲವದು; ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಹಾಗೂ ಅಂತ್ಯಜ (ಅಸ್ಪೃಶ್ಯ)ವೆಂಬ ಮಾನವಕೃತ ವರ್ಗಗಳನ್ನು ಒಪ್ಪಿ, ಪೋಷಿಸಿ, ಬದುಕಿನ ಶ್ರೇಷ್ಠ ವರ್ಗದವರೆಂದುಕೊಳ್ಳುತ್ತಿದ್ದವರು ಇನ್ನುಳಿ ದವರನ್ನು ನಿಕೃಷ್ಟವಾಗಿ ಕಾಣುತ್ತಿದ್ದ ಕಾಲವದು; ಶೂದ್ರ ವರ್ಗದ ಕೆಲವು ಜನ ಹಾಗೂ ಅಂತ್ಯಜ ವರ್ಗದವರು ಮಾಡು ತ್ತಿದ್ದ — ಕಸಗುಡಿಸುವಿಕೆ, ಕ್ಷಾರಿಕೆ, ಬಟ್ಟೆ ತೊಳೆಯುವದು, ಪಾದರಕ್ಷೆ ತಯಾರಿಕೆ ಇತ್ಯಾದಿ–ಕೆಲಸಗಸ್ನು 'ಮೈಲಿಗೆ' ಕೆಲಸ ಗಳೆಂದು, ಇನ್ನುಳಿದ ಕೆಲಸಗಳು 'ಮಡಿ' ಕೆಲಸಗಳೆಂದು ಭಾವಿಸಿ ವ್ಯಕ್ತಿಯ ಅಂತಸ್ತನ್ನು ಅವರು ಮಾಡುವ ಕೆಲಸಕ್ಕೆ ತಳಕು ಹಾಕಿ ಆ ಅವಾಸ್ತವಿಕ ವಿಭಜನೆಯಲ್ಲೇ ಕೆಲವರು ಪರಮಾನಂದವನ್ನು ಪಡೆಯುತ್ತಿದ್ದ ಕಾಲವದು; ದುಡಿಯುವವರನ್ನು ಸದಾ ದುಡಿಯ ಹಚ್ಚಿ, ಅವರ ದುಡಿಮೆಯ ಫಲದ ಮೇಲೆ, ಪರ ಪುಟ್ಟನಂತೆ, ಕೆಲವೊಂದು ಜನ ಮೈಗಳ್ಳರಾಗಿ ವಿಲಾಸಜೀವನವನ್ನು ನಡೆಸು ತ್ತಿದ್ದ ಕಾಲವದು; ಅರ್ಥ ಸಂಪಾದನೆಯೊಂದೇ ಮೂಲೋದ್ದೇ ಶವಾಗಿ ಲಂಚ ವಂಚನೆ ಮೋಸ ಮುಂತಾದ ವಾಮ ಮಾರ್ಗ ಗಳಿಂದ ಜನರು ದ್ರವ್ಯಾರ್ಜನೆ ಮಾಡುತ್ತಿದ್ದ ಕಾಲವದು; ಗುಡಿ ಗುಂಡಾರ ನಿರ್ಮಾಣ, ಹರಕೆನೇಮ, ತೀರ್ಥಾಟನಗಳೆಂದು

ಧರ್ಮದ ಹೆಸರಲ್ಲಿ ಸಂಪತ್ತನ್ನು ಅನುತ್ಪಾದಕ ಚಟುವಟಿಕೆಗಳಲ್ಲಿ ಜನರು ತೊಡಗಿಸಿ ಅದನ್ನು ಪೋಲುಮಾಡುತ್ತಿದ್ದ ಕಾಲವದು; ಒಂದು ಕುಟುಂಬದ ಸದಸ್ಯರು ವಿವಿಧ ದೈವಂಗಳ ಆರಾಧಕರಾಗಿ ಕೌಟುಂಬಿಕ ಜೀವನದಲ್ಲಿ ಸಾಮರಸ್ಯದ ಕೊರತೆಯನ್ನು ಅನುಭವಿಸುತ್ತಿದ್ದ ಕಾಲವದು; ಅಷ್ಟಾದಶವರ್ಣನೆಗಳಿಂದ ಕೂಡಿ, ಪಂಡಿತರ ಮೆಚ್ಚುಗೆಗೆ ಪಾತ್ರವಾದ ಕೃತಿಯೇ ಸಾಹಿತ್ಯವೆಂದು ಕೆಲವೊಂದು ಜನ ಬಲವಾಗಿ ನಂಬಿದ್ದ ಕಾಲವದು; ಸಂಸ್ಕೃತ ಭಾಷೆಯಲ್ಲಿ ಹೇಳಿದುದೇ ಶಾಸ್ತ್ರ, ಆಧ್ಯಾತ್ಮವೆಂದು ಕೆಲವರು ತಿಳಿದಿದ್ದ ಕಾಲವದು;—ಹೀಗೆ ಧಾರ್ಮಿಕ, ಸಾಮಾಜಿಕ, ಆರ್ಥಿಕ ಮುಂತಾದ ಬದುಕಿನ ವಿವಿಧ ರಂಗಗಳಲ್ಲಿ ಪರಂಪರಾನುಗತವಾಗಿ ಬಂದ ಅವೈಚಾರಿಕತೆ ಅಂಧ ಶ್ರದ್ಧೆಗಳು ಮನೆಮಾಡಿಕೊಂಡು ಜನಜೀವನ ನೀರಸವಾಗಿ ಹ್ರಾಸವಾಗಿತ್ತು. ಅಂಥ ಕಾಲದಲ್ಲಿ ಬಸವಾದಿ ಶರಣಶರಣೆಯರು, ವೈಚಾರಿಕ ಕ್ರಾಂತಿಯಿಂದ, ತಮ್ಮ ನಡೆ ನುಡಿ ಶುದ್ಧಿಯಿಂದ ಬದುಕಿನ ಎಲ್ಲ ರಂಗಗಳಲ್ಲೂ ಶುದ್ಧಿಯನ್ನು ತರಲು ಪ್ರಾಮಾಣಿಕವಾಗಿ ಪ್ರಯತ್ನಿಸಿ, ಜನದ ಬದುಕನ್ನು ಅರ್ಥಪೂರ್ಣವಾಗುವಂತೆ ಮಾಡಿದರು, ಸಮಾಜವನ್ನು ಪುನರ್ರಚಿಸುವಲ್ಲಿ ಹೊಸ ಹೊಸ ಸಾಮಾಜಿಕ. ಆರ್ಥಿಕ ಮುಂತಾದ ವಿಚಾರಗಳನ್ನು ಸಾರ್ವಕಾಲಿಕ ಮೌಲ್ಯಗಳಾಗುವಂತೆ ನಿರೂಪಿಸಿದರು. ಸುವ್ಯವಸ್ಥಿತ ಆರ್ಥಿಕ ಅಸ್ತಿವಾರದ ಮೇಲೆ ಸುಭದ್ರ ಸಮಾಜ ಮಂದಿರವನ್ನು ಕಟ್ಟಲು ಅವರು ಪರಿಶ್ರಮಿಸಿದರು. ಅಂದು ಅವರು ನಡೆಸಿದ ಆರ್ಥಿಕ ಚಿಂತನೆಯ ಬಹ್ವಂಶವನ್ನು ಆಧುನಿಕ ಅರ್ಥಶಾಸ್ತ್ರಜರ ವಿಚಾರ

ಗಳು ಹೋಲುತ್ತವೆ. ಬಸವಾದಿ ಶರಣರ ಆರ್ಥಿಕ ಚಿಂತನೆಯು ಸಮೃದ್ಧಿಯಿದ್ದರೂ ಶಾಂತಿಯಿಲ್ಲದಿರುವ ಇಂದಿನ ಸಮಾಜಗಳಿಗೆ ಮಾರ್ಗದರ್ಶಿಯಾಗಬಲ್ಲದು ಎಂದರೆ ಅತಿಶಯೋಕ್ತಿಯೇನಲ್ಲ;

## ೨. ತಾತ್ವಿಕ ಹಿನ್ನೆಲೆ

ಯಾವುದೇ ತತ್ವಶಾಸ್ತ್ರಜ್ಞನ, ವಿಜ್ಞಾನಿಯ, ಅರ್ಥ ಶಾಸ್ತ್ರಜ್ಞನ, ಸಮಾಜಶಾಸ್ತ್ರಜ್ಞವೇತ್ತನ, ಅಥವಾ ವಿಚಾರ ವಾದಿಯ ಯಾವುದೇ ವಿಚಾರವನ್ನು ಪರಿಶೀಲಿಸಿದಾಗ ಅದು ಒಂದು ತಾತ್ವಿಕ ಹಿನ್ನೆಲೆಯನ್ನು ಆಧರಿಸಿರುವುದು ನಮಗೆ ತಿಳಿದು ಬರುತ್ತದೆ. ತಾತ್ವಿಕ ಹಿನ್ನೆಲೆಯಿಲ್ಲದೆ ಸಿದ್ಧಾಂತವೇ ಇಲ್ಲ; ಇದ್ದರೂ ಅದು ಸಿದ್ಧಾಂತವಲ್ಲ. ಹಾಗೆಯೇ ಶರಣರ ಆರ್ಥಿಕ ಚಿಂತನೆಯು ಕೆಳಗಿನ ತಾತ್ವಿಕ ಹಿನ್ನೆಲೆಯನ್ನಾಧರಿಸಿದೆ.

೧. ಧರ್ಮವು ಮಾನವ ಬದುಕಿನಲ್ಲಿ ಹಾಸುಹೊಕ್ಕಾಗಿದೆ. ಧರ್ಮರಹಿತ ಬದುಕಿಲ್ಲ; ಇದ್ದರೂ ಅದು ಅರ್ಥಹೀನ.

ಈ ಸೃಷ್ಟಿಯೆಲ್ಲಕ್ಕೂ ಕಾರಣೀಭೂತವಾಗಿ, ಸೃಷ್ಟಿಯೊಂದಿಗೇ ಸೃಷ್ಟಿಹೊಂದಿ ಮಾನವನ ಇತಿ ಮಿತಿಗಳನ್ನು ಮೀರಿದ, ಮಾನವ ಬದುಕಿಗೆ ಪರಮ ಆದರ್ಶವಾದ, ಪವಿತ್ರವಾದ ಶಕ್ತಿ–ದೇವ (ಶಿವ) –ನೊಂದಿಗೆ ಜೀವನು ಸಾಮರಸ್ಯವನ್ನು ಹೊಂದುವ ಹಂಬಲದಿಂದ ಮಾಡುವ ಪ್ರಾಮಾಣಿಕ ಪ್ರಯತ್ನವೇ ಧರ್ಮ. ಜೀವನು ತನ್ನ ಸ್ವರೂಪವನ್ನು ತಿಳಿದು, ಅದರಂತೆ ನಡೆದು ಬದುಕು ಲೇಸಾಗುವಂತೆ

ಮಾಡುವ ಪ್ರಯತ್ನವೇ ಧರ್ಮ. ಈ ನಿಟ್ಟಿನಲ್ಲಿ, ನೀತಿಯುತ ಆಚರಣೆಯಿಂದ ಬಹಿರಂಗ ಹಾಗೂ ಅಂತರಂಗ ಶುದ್ಧಿಯನ್ನು ಹೊಂದಿ, ಬದುಕನ್ನು ಲೇಸಾಗಿಸಿ, ಶಿವ–ಜೀವರ ಸಾಮರಸ್ಯವನ್ನು ಹೊಂದುವ ಮಾರ್ಗವನ್ನು ಬೋಧಿಸುವ ವೀರ ಶೈವ ಧರ್ಮವನ್ನು ಶರಣರು ಪ್ರತಿಪಾದಿಸಿದ್ದಾರೆ.

೨. ಶಿವ–ಜೀವರ ಸಾಮರಸ್ಯವೇ ಬದುಕಿನ ಪರಮ ಗುರಿ.

ಈ ಗುರಿ ಸಾಧನೆಯಲ್ಲಿ ನಮ್ಮೆಲ್ಲ ಚಟುವಟಿಕೆಗಳಲ್ಲಿ ತಾಕಲಾಟವುಂಟಾಗದೆ. ಅವು ಅದಕ್ಕೆ ಪೂರಕ ಪೋಷಕವಾಗಿರಬೇಕು,

೩. ಮೇಲೆ ಹೇಳಿದ ಗುರಿ ಸಾಧನೆಯಲ್ಲಿ ನಮ್ಮ ವರ್ತನೆಗೆ ದೇವನು ಮಾರ್ಗದರ್ಶಿ.

೪. ಪ್ರತಿಯೊಬ್ಬ ವ್ಯಕ್ತಿಯು ತನ್ನ ಒಲುವುಗಳ ಉತ್ತಮ ನಿರ್ಣಾಯಕ.

೫. ವ್ಯಕ್ತಿಯಿಂದ ಸಮಾಜ; ಸಮಾಜದಿಂದ ವ್ಯಕ್ತಿ, ಇವೆರಡರಲ್ಲಿ ಅವಿನಾಭಾವ ಸಂಬಂಧ ಉಂಟು.

೬. ವೈಯಕ್ತಿಕ ವಿಕಾಸ ಮತ್ತು ಸಾಮಾಜಿಕ ವಿಕಾಸ ಇವುಗಳು ಒಂದಕೊಂದು ಪೋಷಕ.

ಅಮಿತ; ಒಂದರನಂತರ ಮತ್ತೊಂದರ ಅಪೇಕ್ಷೆ. ಅಪೇಕ್ಷೆಗಳ ನ್ನೆಲ್ಲಾ ತೃಪ್ತಿಪಡಿಸುವುದೆಂದರೆ ಮೃಗಜಲ ಮರೀಚಿಕೆಯನು ಹಿಡಿಯು ಹೊರಟು ವೃಥಾ ಆಯಾಸಪಟ್ಟಂತೆ: ಅಪೇಕ್ಷೆಗ್ನಳ

## ಆರ್ಥಿಕ ಚಿಂತನೆ

### ೧. ಇಷ್ಟಗಳ ಸಂಯುಕ್ತೀಕರಣ :

ಮಾನವನನ್ನು 'ಇಷ್ಟಗಳ ಕಂತೆ' ಎಂದು ಕರೆಯು ವುದುಂಟು. ಏಕೆಂದರೆ ಅವನ ಇಷ್ಟಗಳು ಅಮಿತ. ಅವು ಗಳನ್ನು ಸ್ಥೂಲವಾಗಿ, (೧) ಅಗತ್ಯಗಳು ಮತ್ತು (೨) ಅಪೇಕ್ಷೆ ಗಳು ಎಂದು ವಿಂಗಡಿಸುತ್ತೇವೆ. ಯಾವ ಇಷ್ಟಗಳ ತೃಪ್ತಿಯು ಮಾನವನ ಇರುವಿಕೆಗೆ ಅವಶ್ಯಕವೋ ಅಂಥವುಗಳನ್ನು ಅಗತ್ಯ ಗಳೆಂದು– ಅನ್ನ, ಬಟ್ಟೆ, ವಸತಿ, ನಿದ್ರೆ, ಮೈಥುನಗಳ ಇಷ್ಟ– ಯಾವ ಇಷ್ಟಗಳ ತೃಪ್ತಿಯು ಮಾನವನಿಗೆ ಐಹಿಕ ಸುಖವನ್ನು ತಂದುಕೊಡುವುವೋ ಅಂಥವುಗಳನ್ನು ಅಪೇಕ್ಷೆಗಳೆಂದು—ಪಾದ ರಕ್ಷೆ, ಪೀಠೋಪಕರಣ, ನಾಟಕ, ನೃತ್ಯ, ಸಂಗೀತ, ಇತ್ಯಾದಿಗಳ ಇಷ್ಟವು—ಕರೆಯುತ್ತೇವೆ. ಅಗತ್ಯಗಳು ಕೆಲವಾದರೆ ಅಪೇಕ್ಷೆ ಗಳು ಹಲವು. ಅವುಗಳಿಗೆ ಮಿತಿಯೆಂಬುದಿಲ್ಲ. ಹುಟ್ಟಿನಿಂದ ಮೊದಲುಗೊಂಡು ಮರಣದವರೆಗೂ ಒಂದಿಲ್ಲೊಂದು ಇಷ್ಟವು ಮಾನವನನ್ನು ಪೀಡಿಸುವುದನ್ನು ಅಂಬಿಗಚೌಡಯ್ಯನು

ಬಡವಂಗೆಉಂಬುವ ಚಿಂತೆ;<br>
ಉಣಲಾದರೆ ಉಡುವ ಚಿಂತೆ;<br>
ಉಡಲಾದರೆಇರುವ ಚಿಂತೆ;<br>
ಇರಲಾದರೆ ಹೆಂಡಿರ ಚಿಂತೆ;<br>
ಹೆಂಡಿರಾದರೆ ಮಕ್ಕಳ ಚಿಂತೆ;

ಮಕ್ಕಳಾದರೆ ಬದುಕಿನ ಚಿಂತೆ;
ಬದುಕಾದರೆ ಕೇಡಿನ ಚಿಂತೆ,
ಕೇಡಾದರೆ ಮರಣದ ಚಿಂತೆ;

ಎಂದು ಸುಂದರವಾಗಿ ನಿರೂಪಿಸಿದ್ದಾನೆ. ಮೊದಲು ಅನ್ನ, ನಂತರ ಬಟ್ಟೆ ತದನಂತರ ವಸತಿ ಹೀಗೆ ಒಂದರನಂತರ ಒಂದು ಇಷ್ಟ ಮಾನವನನ್ನು ಪೀಡಿಸುತ್ತಲೇ ಇದೆ.

ಅಗತ್ಯಗಳ ತೃಪ್ತಿ ಮಾನವನ ಇರುವಿಕೆಗೆ ಅವಶ್ಯಕ ಎಂದು ಹೇಳಿದೆ. ಅವುಗಳನ್ನು ತೃಪ್ತಿಪಡಿಸದೆ ಮಾನವನ ಬದುಕು ಮುಂದೆ ಸಾಗದು. ಅಗತ್ಯಗಳ ನಂತರವೇ ಅಪೇಕ್ಷೆಗಳು.

ಕಾಯಕ್ಕೆ ಮಜ್ಜನ, ಪ್ರಾಣಕ್ಕೆ ಓಗರ
ಇವ ಮಾಡಲೆ ಬೇಕು;
ಸುಳಿವ ಸುಳುಹುಳ್ಳನ್ನಕ್ಕ ಇವ ಮಾಡಲೇಬೇಕು...
(ಅವಚ; ವ. ೮೨)

ಎಂದು ಹೇಳುವಲ್ಲಿ ಅಲ್ಲಮಪ್ರಭುವು. ವಿಚಾರಶೀಲ ಮನುಷ್ಯನು ಮೊದಲು ಅಗತ್ಯಗಳ ಪೂರೈಕೆಯ ಕಡೆಗೆ ತನ್ನ ಗಮನವೀಯತಕ್ಕದ್ದು ಎಂದು ಸೂಚಿಸಿದ್ದಾನೆ. ಅಗತ್ಯಗಳ ತೃಪ್ತಿಯಾದ ಮೇಲೆ ಅಪೇಕ್ಷೆಗಳತ್ತ ಮಾನವನ ಮನ ಹರಿಯುವುದು ಸಹಜ. ಆದರೆ ಅಪೇಕ್ಷೆಗಳ ಬೆನ್ನು ಹತ್ತಿದವನಿಗೆ ತೃಪ್ತಿಯಿಲ್ಲ; ತೃಪ್ತಿಯಿಲ್ಲದಲ್ಲಿ ಶಾಂತಿಯಿಲ್ಲ. ಏಕೆಂದರೆ ಅಪೇಕ್ಷೆಗಳು ಸುಳಿಯಲ್ಲಿ ಸಿಲುಕಿದವನಿಗೆ ತೊಳಲಾಟವಲ್ಲದಿಲ್ಲ. ಅಂತೆಯೇ ಮಹಾದೇವಿಯಕ್ಕನು,

"ಮನ ಬಂದುದನು ಬಯಸಿ ಬೇವುತ್ತಿದ್ದೇನಯ್ಯಾ....
ಮವ; ವ. ೩೨)

ಎಂದು ನುಡಿದಿದ್ದಾಳೆ.

ದೇಹಕ್ಕೆ ಅಗತ್ಯಗಳಿರುವಂತೆ ಆತ್ಮಕ್ಕೂ ಉಂಟು...ಎಲ್ಲ ಎಲ್ಲಪನರಿದು ಫಲವೇನಯ್ಯಾ, ತನ್ನ ತಾನರಿಯಬೇಕಲ್ಲದೆ?... ಎಂಬ ಮಹಾದೇವಿಯಕ್ಕನ ಪ್ರಶ್ನೆಯಲ್ಲಿ, "ಲಿಂಗವನರಿಯದೆ ಏನನರಿದಡೆಯೂ ಫಲವಿಲ್ಲ; ಲಿಂಗವನರಿದ ಬಳಿಕ ಮತ್ತೇನನರಿದಡೆಯೂ ಫಲವಿಲ್ಲ" ಎಂಬ ಅಲ್ಲಮಪ್ರಭುವಿನ ಅನುಭವ ನುಡಿಯಲ್ಲಿ ಆತ್ಮನ ಹಂಬಲ ಪುಟಗೊಂಡು ನಿಂತಿದೆ. ಸೃಷ್ಟಿಯೆಲ್ಲದರ ಕರ್ತೃ ಯಾರು ?, ತಾನು ಯಾರು ? ಅವನಿಗೂ ತನಗೂ ಏನು ಸಂಬಂಧ ? ಎಂಬುದನ್ನು ತಿಳಿಯುವುದೇ ಆತ್ಮಿಕ ಹಂಬಲ. ಲೇಸೆನಿಸಿಕೊಂಡು ಬಾಳುತ್ತ ಶಿವ-ಜೀವರ ಸಾಮರಸ್ಯವನ್ನು ಸಂಪಾದಿಸಬೇಕೆಂಬುದೆ ಜೀವನ ಆತ್ಮಿಕ ಹಂಬಲ. ಇದೇ ನಮ್ಮ ಬದುಕಿನ ಪರಮ ಗುರಿ. ಈ ಗುರಿಸಾಧನೆಯಲ್ಲಿ ನಮ್ಮ ದೈಹಿಕ ಆಪೇಕ್ಷೆಗಳು ಅಡ್ಡಿಯಾಗಬಾರದು. ಆತ್ಮದ ಹಂಬಲದ ತೃಪ್ತಿಯಿಂದ ನಿಜವಾದ ಸುಖ ಶಾಂತಿ; ನಿಜವಾದ ಸುಖ ಶಾಂತಿಗಳು ನಮಗೆ ಲಭಿಸಬೇಕಾದರೆ ನಮ್ಮ ಇಷ್ಟಗಳನ್ನು ಯುಕ್ತಗೊಳಿಸುವದು ಅನಿವಾರ್ಯ. ಅತ್ಮನ ಹಸಿವನ್ನು ಹಿಂಗಿಸುವಲ್ಲಿ ದೈಹಿಕ ಬಯಕೆಗಳನ್ನು ಯುಕ್ತಗೊಳಿಸಬೇಕೆನ್ನುವ ಅಗತ್ಯವನ್ನು ಕುರಿತು ಎಲೇಶ್ವರದ ಕೇತಯ್ಯನು,

"ಭಾಂಡ ಭಾಜನ ಉಪಕರಣ ವಸ್ತ್ರ ಮುಂತಾದ ಸಕಲ ದ್ರವ್ಯಂಗಳ
ಮನದ ಕಟ್ಟಿಂಗೆ ತಟ್ಟುಮುಟ್ಟನರಿತು

ಅಹುದಾದುದನೊಪ್ಪಿ, ಅಲ್ಲದುದ ಬಿಟ್ಟು
ಇದಿರು ಮೆಚ್ಚುವಂತೆ ಕಪಟ ಅನುಕರಣೆಗೆ ಒಳಗಾಗದೆ
ಲಿಂಗ ಮೆಚ್ಚುವಂತೆ, ಶರಣರು ಒಪ್ಪುವಂತೆ"

(ಸಪುವ-1; ವ. 1597)

"ಸಕಲ ಸುಖಭೋಗಂಗಳ ಹಿಡಿವಲ್ಲಿ
..............................
ಅಂಗಕ್ಕೆ ಕಟ್ಟು, ಆತ್ಮಂಗೆ ವ್ರತ...

(ಸಪುವ—1: ವ. 1599)

"ಮನಕ್ಕೆ ವ್ರತವ ಮಾಡಿ, ತನುವಿಗೆ ಕ್ರೀಯಮಾಡಬೇಕು.
ಇಂದ್ರಿಯಂಗಳಿಗೆ ಕಟ್ಟನಿಕ್ಕಿ,
ಆತ್ಮನ ಸಂದೇಹದ ಬಿಡಿಸಿ ಕ್ರೀಯ ಮಾಡಬೇಕು..."

(ಸಪುವ—1 : ವ. 1644)

ಎಂದು ನುಡಿದಿದ್ದಾನೆ.

ನಾವು ನಮ್ಮ ಇಷ್ಟಗಳ 'ವಿಷದ ಸುಳಿ'ಯಲ್ಲಿ ಸಿಲುಕದೆ, ಬದುಕಿನ ಪರಮ ಗುರಿಯಾದ ಶಿವ-ಜೀವರ ಸಾಮರಸ್ಯದ ಆನಂದಾನುಭವವನ್ನು ಪಡೆಯಬೇಕಾದರೆ ಇಷ್ಟಗಳ ಸಂಯುಕ್ತೀಕರಣ ಅನಿವಾರ್ಯವೆಂದು ಶರಣರು ಅಭಿಪ್ರಾಯಪಟ್ಟಿದ್ದಾರೆ. ಗಾಂಧೀಜಿಯವರು ಕೂಡಾ ಇದೇ ಅಭಿಪ್ರಾಯವುಳ್ಳವರಾಗಿದ್ದರು. ಇತ್ತೀಚಿತ್ತಲಾಗಿ ಆಧುನಿಕ ವಿಚಾರಶೀಲರೂ ಮಾನವ ಬದುಕಿನ ಶಾಂತಿಗೆ ಇಷ್ಟಗಳ ಸಂಯುಕ್ತೀಕರಣ ಅನಿವಾರ್ಯವೆಂದು ಅಭಿಪ್ರಾಯಪಡುತ್ತಲಿದ್ದಾರೆ. ಸಮೃದ್ಧಿಯಿದ್ದರೂ ಶಾಂತಿಯಿಲ್ಲದ ಅಮೇರಿಕೆಯ ಜನರಿಗೆ ಶರಣರ ವಿಚಾರಪ್ರಣಾಮ

ವರದಾನವಾಗಬಲ್ಲದು; ಮಾನವನ ಚಟುವಟಿಕೆಗಳೆಲ್ಲಕ್ಕೂ ಅವನ ಇಷ್ಟಗಳೇ ಮೂಲಕಾರಣವಾಗಿರುವುದರಿಂದ ಅವನ ಹಿತ ಅಹಿತವೆಲ್ಲವೂ ಇಷ್ಟಗಳನ್ನವಲಂಬಿಸಿರುವುದರಿಂದ ಅವುಗಳನ್ನು ಯುಕ್ತಗೊಳಿಸಬೇಕಾದುದು ಅನಿವಾರ್ಯವೆಂದು ಹೇಳದೆ ವಿಧಿಯಿಲ್ಲ;

## ೨. ಶ್ರಮ – ಕಾಯಕ

ಸಂಪತ್ತಿನ ಉತ್ಪತ್ತಿಯಾಗದೆ ಮಾನವನ ಇಷ್ಟಗಳನ್ನು ತೃಪ್ತಗೊಳಿಸುವದು ಸಾಧ್ಯವಿಲ್ಲ. ಶ್ರಮವಿಲ್ಲದೆ ಉತ್ಪಾದನೆಯಿಲ್ಲ ಸಿರತವಾದ ಮಾನವ ಪರಿಶ್ರಮ ಅಥವಾ ಮಾನವಚಟುವಟಿಕೆಗೆ ಶ್ರಮವೆಂದು ಅರ್ಥಶಾಸ್ತ್ರದಲ್ಲಿ ಕರೆಯಲಾಗಿದೆ. ಉತ್ಪಾದನೆಯಲ್ಲಿ ಶ್ರಮದ ಅನಿವಾರ್ಯತೆಯನ್ನು ಶರಣರು,

"ಕೃಷಿಯ ಮಾಡಿ ಉಣ್ಣದೆ ಹಸಿವು ಹರಿವ
ಪರಿಯಿನ್ನೆಂತೊ?...
—ಸಿದ್ಧರಾಮೇಶ್ವರ (ಸಿವ; ವ. 512)

"ದರಿದ್ರ ಸಿರಿವಂತನ ನನೆವಡೆ ಸಿರಿವಂತನಾಗಬಲ್ಲನೆ?...
—ಬಸವಣ್ಣ (ಬವ; ವ. 636)

"ಕತ್ತಲ ಮನೆಯಲಿರ್ದ ಮನುಜನು
ಜ್ಯೋತಿಯನೆಸಿತು ಹೊತ್ತು ನೆನೆದಡೆಯೂ
ಬೆಳಕಾಗಬಲ್ಲುದೆ, ಬೆಂಕಿಯ ಹೊತ್ತಿಸದನ್ನಕ್ಕ?"
...ಚೆನ್ನಬಸವಣ್ಣ (ಚವ; ವ. 921)

ಎಂದು ವ್ಯಕ್ತಪಡಿಸಿದ್ದಾರೆ.

ಶ್ರಮವನ್ನು ಬಳಸಿಕೊಂಡು ವಸ್ತು ಮತ್ತು ಸೇವೆಗಳ ಉತ್ಪಾದನೆ ಮಾಡುವ ಚಟುವಟಿಕೆಗಳೆಲ್ಲ ಆರ್ಥಿಕ ಚಟುವಟಿಕೆಗಳು. ಸಂಪತ್ತಿನ ಉತ್ಪಾದನೆ ಹಾಗೂ ಅರ್ಥ ಸಂಪಾದನೆಗಳು ಆರ್ಥಿಕ ಚಟುವಟಿಕೆಯ ಸೀಮಿತ ಉದ್ದೇಶಗಳು. ದೇಶದಲ್ಲಿ ಆರ್ಥಿಕ ಚಟುವಟಿಕೆಯು ಹೆಚ್ಚಿದಂತೆ ಸಂಪತ್ತಿನ ಉತ್ಪಾದನೆ ಹೆಚ್ಚುತ್ತದೆ; ಆರ್ಥಿಕ ಚಟುವಟಿಕೆ ಕುಗ್ಗಿದರೆ ಉತ್ಪಾದನೆಯೂ ಕುಗ್ಗುತ್ತದೆ.

ಮೇಲು ನೋಟಕ್ಕೆ ಶರಣರ 'ಕಾಯಕ' ಒಂದು ಅರ್ಥಿಕ ಚಟುವಟಿಕೆ ಎಂಬ ಕಲ್ಪನೆ ಮೂಡಿಬಂದರೂ ಅದಕ್ಕೂ 'ಕಾಯಕ' ಕ್ಕೂ ಅಜಗಜಾಂತರ. ಕಾಯಕ ತತ್ವ ಶರಣರ ವಿಶಿಷ್ಟ ಕೊಡುಗೆ ಕಾಯಕವು ಒಂದು ಪರಿಕಲ್ಪನೆಯೂ ಹೌದು; ಸಂಸ್ಥೆಯೂ ಹೌದು; 'ಕಾಯಕ'ವು ತಾತ್ವಿಕ–ಧಾರ್ಮಿಕ–ಸಾಮಾಜಿಕ–ನೈತಿಕ–ಆರ್ಥಿಕ ಪರಿಕಲ್ಪನೆಯಾದಂತೆ ಅದು ಒಂದು ಧಾರ್ಮಿಕ–ಸಾಮಾಜಿಕ–ಆರ್ಥಿಕ ಸಂಸ್ಥೆಯಾಗಿದೆ.

ಕಾಯಕವೆಂದರೇನು ? ಪ್ರಶ್ನೆ ಕಿರಿದು; ಆದರೆ ಜಟಿಲ. ಉತ್ತರ ಸವಿಸ್ತಾರ. ಕಾಯ ಶಬ್ದವನ್ನೊಳಗೊಂಡಿದೆ ಕಾಯಕ. ಕಾಯಕದಿಂದ ಕಾಯಕ. ದೇಹ ಮನಭಾವ (ಅಂಗ ಮನಭಾವ–ಸ್ಥೂಲ, ಸೂಕ್ಷ್ಮ, ಕಾರಣ ತತ್ವ)ಗಳಿಂದ ಕೂಡಿದದು ಕಾಯ. ಈ ಕಾಯವು–ಕ್ರಿಯೆಯಿಂದ ಕೂಡಿದೆ, ಕಾರಣ ಕಾಯವೆಂದರೆ ಕ್ರಿಯೆ-ದೈಹಿಕ ಮಾನಸಿಕ ಭಾವಿಕ ಕ್ರಿಯೆ. ಕ್ರಿಯೆಯಿಂದ ಕಾಯಕ. ಬಹಿರಂಗ ಅಂತರಂಗ ಕ್ರಿಯೆಯಿಂದ ಕೂಡಿದುದು ಕಾಯಕ. ಈ ಬಗೆಯ ಕಾಯಕದಿಂದ ಉತ್ಪಾದನೆ; ಉತ್ಪಾದನೆ

ಯಿಂದ ಬದುಕು. ಕಾಯವಿದ್ದರೆ ಕಾಯಕ; ಕಾಯಕವಿದ್ದರೇನೆ ಕಾಯ. ಕಾಯಕ್ಕೆ–ದೇಹ ಮನಭಾವಗಳಿಗೆ–ಒಂದು ಕಟ್ಟನ್ನು ಕೊಟ್ಟು ಅದು ತನ್ನ ಗಮ್ಯವಾದ ಶಿವನ (ದೇವನ) ನಿವಾಸ–ಕೈಲಾಸವಾಗುವಂತೆ ಮಾಡುವುದೇ ಕಾಯಕ. ಕಾಯ ಕೈಲಾಸವಾದ ಬಳಿಕ ಆ ಕಾಯದಿಂದ ಸಾಗುವ ಕಾಯಕವೂ ಕೈಲಾಸ... 'ಕಾಯಕದೊಳಗೆ ಮೂರರ ಕೂಟ' ಎನ್ನುವ ನುಲಿಯ ಚಂದಯ್ಯನ ನುಡಿಯಲ್ಲಿ ದೇಹ ಮನ ಭಾವಗಳ ಕೂಟವೆಂದರ್ಥ.

ದೇಹ ಮನ ಭಾವಗಳ ಕ್ರಿಯೆ ಸಮರಸವಾಗಿ ನಿಂದುದೇ ಕಾಯಕ. ತ್ರಿಕರಣಶುದ್ಧಿಯಿಂದ ಮಾಡಿದ ಕ್ರಿಯೆಯೇ ಕಾಯಕ. ಅದುವೇ ಕೈಲಾಸ.

ನಾವು ನಮ್ಮ ದೈಹಿಕ ಮಾನಸಿಕ ಭಾವಿಕ ಒಲವುಗಳಿಗ ನುಗುಣವಾಗಿ ಉದ್ಯೋಗಗಳನ್ನು ಕೈಕೊಂಡು, ಶಿವಭಾವದಿಂದ ತನುಮನ ಬಳಲಿಸಿ, ಬಂದದ್ರವ್ಯದಲ್ಲಿ ಪರಹಿತಭಾವನೆ ಯಿಂದ ಗುರುಲಿಂಗ ಜಂಗಮಕ್ಕೆ ಸವೆಸಿ, ತತ್ ಪ್ರಸಾದವನ್ನು ಸ್ವೀಕರಿಸಿ, ಪ್ರಸನ್ನತೆಯಿಂದ ಇದ್ದಾಗ ನಮ್ಮ ಉದ್ಯೋಗಗಳೆಲ್ಲ ಕಾಯಕಗಳಾಗಿ ಪರಿಣಮಿಸುತ್ತವೆ. ಕಾಯಕವನ್ನು ಕುರಿತು ಶರಣರಾಡಿದ ನುಡಿಗಳನ್ನಾಲಿಸಿ ;

"ಅಸಿಯಾಗಲಿ ಮಸಿಯಾಗಲಿ ಕೃಷಿಯಾಗಲಿ
ವಾಣಿಜ್ಯ ಮುಂತಾದ ಕೃಷಿಯ ಮಾಡುವಲ್ಲಿ
ಪಶುಪತಿಗೆಂದೇ ಪ್ರಮಾಣಿಸಿ.........

ಮೋಳಿಗೆ ಮಾರ್ಯಯ್ಯ.

"ಹೊಲೆಹೊಲೆಯರ ಮನೆಯ ಹೊಕ್ಕಾದಡೆಯೂ,
ಸಲೆ ಕೈಕೂಲಿಯ ಮಾಡಿಯಾದರೆಯೂ,
ನಿಮ್ಮ ನಿಲವಿಂಗೆ ಕುದಿವೆನಲ್ಲದೆ
ಎನ್ನೊಡಲವಸರಕ್ಕೆ ಕುದಿದೆನಾದಡೆ ತಲೆದಂಡ."
—ಬಸವಣ್ಣ(ಬವ; ವ. 709)

"ಕಾಯಕವೆಂದು ಕಾಯುವ ಬಳಲಿಸದೆ,
ತನು ಕರಗದೆ, ಮನ ನೋಯದೆ,
ಕಾಡಿ ಬೇಡಿ ಮಾಡುವುದು ದಾಸೋಹವೆ ?"
-ಶಿವಲೆಂಕ ಮಂಚಣ್ಣ (ಸಪುವ;–1; ವ. 833)

"ತನುಕರಗಿ, ಮನ ಬಳಲಿ,
ಬಂದ ಚರದ ಅನುವರಿತು,
ಸಂದಿಲ್ಲದೆ ಸಂಶಯವಿಲ್ಲದೆ
ಜಂಗಮಲಿಂಗಕ್ಕೆ ದಾಸೋಹವ ಮಾಡುವುದೆ ಮಾಟ"
-ನುಲಿಯ ಚಂದಯ್ಯ (ಸಪುವ–1; ವ. 1236)

"ಕಾಯಕ್ಲೇಶದಿಂದ ತನುಮನ ಬಳಲಿಸಿ, ಧನವಗಳಿಸಿ
ಗುರುಲಿಂಗಜಂಗಮಕ್ಕೆ ವೆಚ್ಚಿಸಿ ದಾಸೋಹವ ಮಾಡುವ
ಸದ್ಭಕ್ತನ ಪಾದವ ತೋರಯ್ಯಾ, ನಿಮ್ಮ ಧರ್ಮ;
....................................
ಅಂತಪ್ಪ ಭಕ್ತನ ಕಾಯಕವೇ ಕೈಲಾಸ.........
-ಚೆನ್ನಬಸವಣ್ಣ (ಚವ; ವ. 84)

"ನಾನು ಆರಂಭವ ಮಾಡುವೆನಯ್ಯಾ ಗುರುಪೂಜೆಗೆಂದು,
ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು,

ನಾನು ಪರಸೇವೆಯ ಮಾಡುವೆನಯ್ಯಾ ಜಂಗಮ
ದಾಸೋಹಕ್ಕೆಂದು,

.............. ..............................................

ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದು ಕ್ರೀಯ
ಮಾಡೆನು"

ಬಸವಣ್ಣ (ಬವ; ವ. 708)

ತಾನು ಕೈಕೊಂಡ ಉದ್ಯೋಗ ಕೇವಲ ಸ್ವಾರ್ಥದಿಂದ ಅಂದರೆ ತನ್ನ ಮತ್ತು ತನ್ನ ಕುಟುಂಬದ ರಕ್ಷಣೆಗೆಂಬ ಸಂಕುಚಿತ ಮನೋಭಾವದಿಂದ ಪ್ರೇರಿತವಾಗಿದ್ದರೆ ಅದು ಆರ್ಥಿಕ ಚಟು-ವಟಿಕೆಯಾಗುತ್ತದೆ; ಜೀವನೋಪಾಯವಾಗುತ್ತದೆ. ಅದಕ್ಕೆ ಪ್ರತಿಯಾಗಿ ಕೈಕೊಂಡ ಉದ್ಯೋಗ ಶಿವಭಾವ (ಪರಹಿತ,) ದಿಂದ ಅಂದರೆ ಆತ್ಮವಿಕಾಸ ಹಾಗೂ ಸಮಾಜವಿಕಾಸಕ್ಕೆ ಎಂಬ ವಿಶಾಲ ಮನೋಭಾವದಿಂದ ಪ್ರೇರಿತವಾಗಿದ್ದರೆ ಅದು 'ಕಾಯಕ' ವಾಗುತ್ತದೆ; ಶಿವೋಪಾಯವಾಗುತ್ತದೆ. ಮೇಲೆ ಉದ್ಧರಿಸಿದ ಶರಣರ ನುಡಿಗಳಲ್ಲಿ ಉಲ್ಲೇಖಗೊಂಡಿರುವ ಗುರು ಲಿಂಗ ಜಂಗಮ ಈ ಪದಗಳು ವ್ಯಕ್ತಿಗಳನ್ನು ಮಾತ್ರ ಕುರಿತು ಹೇಳಿದುವಲ್ಲ. ಶಿವಚೈತನ್ಯವನ್ನೊಳಗೊಂಡಿರುವ ಮಾನವಾದಿ ಪಶುಪಕ್ಷಿಗಳನ್ನು ಗಮನದಲ್ಲಿಟ್ಟುಕೊಂಡು ಬಳಸಿರುವ ಪದಗಳು. ಗುರುಲಿಂಗ ಜಂಗಮರಿಗೆ ಧನವನ್ನು ಸವೆಸುವುದು ಅಂದರೆ' ಧರ್ಮ ಉಳಿವಿಗೆ ಹಾಗೂ ಸಮಾಜವಿಕಾಸಕ್ಕೆ ಧನವನ್ನು ಬಳಸುವುದು ಎಂದರ್ಥ. ಜೀವ ಜಂಗಮವೆಲ್ಲ ಜಂಗಮ. ಈ ಜಂಗಮದಿಂದ ಕೂಡಿದ್ದು ಸಮಾಜ. ಒಟ್ಟಿನಲ್ಲಿ, ಅಧ್ಯಾತ್ಮದ ಅಂತರ್ಯವಿರುವ,

ಸಂಪತ್ತಿನ ಉತ್ಪಾದನೆಗೆ ಸಹಾಯಕವಾಗುವ ಯಾವುದೇ ದೈಹಿಕ-ಬೌದ್ಧಿಕ ಶ್ರಮವನ್ನು ನಾವು 'ಕಾಯಕ' ವೆಂದು ಕರೆಯಬಹುದು. ಕಾಯಕವು ಒಂದು ಧಾರ್ಮಿಕ–ಆರ್ಥಿಕ ಚಟುವಟಿಕೆ, ಆರ್ಥಿಕ ಚಟುವಟಿಕೆಯಿಂದ ಸಂಪತ್ತು; ಕಾಯಕದಿಂದ ಶಿವ–ಸಂಪತ್ತು. ಕಾಯಕದಿಂದ ಪ್ರಪಂಚ ಹಾಗೂ ಪರಶಿವ ಇವುಗಳ ಸಾಧನೆ. ಕಾಯಕದಿಂದ ಬದುಕು ಪಾವನವಾಗಬೇಕು. ಬ್ರಹ್ಮದ ಸಾಕ್ಷಾತ್ಕಾರವಾಗಬೇಕು.

ಕಾಯಕವು ಸತ್ಯವು ಶುದ್ಧವು ಆಗಿರಬೇಕು. ಸತ್ಯ–ಶುದ್ಧ ಕಾಯಕವನ್ನು ಕುರಿತು ಶರಣರು,

ಸತ್ಯಶುದ್ಧವಿಲ್ಲದುದು ಕಾಯಕವಲ್ಲ"

-ಕಾಳವ್ವೆ (ಶಿಶವ; ಪು, 389, ವ. 211)

"ಅಂಗಕ್ಕೆ ಆಚರಣೆ, ಮನಕ್ಕೆ ನಿರ್ಮಲ
ಮನೋಹರವಾಗಿ

........................................................

ತನ್ನ ಭಾವಕ್ಕೆ ಒಪ್ಪಿದುದ ಒಪ್ಪಿ, ಅಲ್ಲದುದ ಬಿಟ್ಟ"

–ಏಲೇಶ್ವರದ ಕೇತಯ್ಯ (ಸಪುವ–1; ವ. 1596)

"ಹಾಗದ ಕಾಯಕವ ಮಾಡಿ ಹಣ ವಡ್ಡವ ತಾ ಎಂಬಲ್ಲಿ
ಸತ್ಯದ ಕಾಯಕವುಂಟೆ ?"

—ಆಯ್ದಕ್ಕಿ ಮಾರಯ್ಯ (ಸುಪುವ–1; ವ. 1264)

"ಅಸಿಯಾಗಲಿ ಕೃಷಿಯಾಗಲಿ ವಾಚಕ ವಾಣಿಜ
ಮಸಿಯಾಗಲಿ
ಮಾಡುವಲ್ಲಿ ಹುಸಿಯಿಲ್ಲದಿರಬೇಕು"

—ಮೆರೆಮಿಂಡಯ್ಯ (ಸಪುವ–1; ವ. 25)

"ತನುಮನ ಬಳಲದೆ ಉದ್ದಂಡವೃತ್ತಿಯಲ್ಲಿ ಧನವ ಗಳಿಸಿ
ಗುರುಲಿಂಗ ಜಂಗಮಕ್ಕೆ ವೆಚ್ಚಿಸಿ ದಾಸೋಹವ ಮಾಡಿ
ಭಕ್ತನಾದೆನೆಂಬವನ ತೋರದಿರಯ್ಯಾ;
ಅದೇಕೆಂದಡೆ :
ಅವ ಪರಧನಚೋರಕ,ಅವ ಪಾಪಿ, ಕೋಪಿ, ಪರಿಭ್ರಷ್ಟ"

ಚೆನ್ನಬಸವಣ್ಣ(ಬವ; ವ. 67)

"ಗುರುಲಿಂಗ ಜಂಗಮದ ಹೆಸರಿನಿಂದ ಕಾಯಕವ ಮಾಡಿ
ಗುರು ಚರಕೆ ವಂಚಿಸಿ,
ತಾಯಿ, ತಂದೆ, ಬಂಧು ಬಳಗ, ಹೆಂಡತಿ,
ಒಡಹುಟ್ಟಿದವರು ಎಂದು
ಸಮಸ್ತ ಪದಾರ್ಥವ ಜಾಗೆಯ ಮಾಡುವನೊಬ್ಬ
ಭಕ್ತದ್ರೋಹಿ ನೋಡಾ"

—ಬಸವಣ್ಣ(ಬವ;ವ 1122)

ಎಂದು ನುಡಿದಿದ್ದಾರೆ. ಸತ್ಯವೆಂದರೆ ಸಹಜವಾದುದು; ಇದ್ದುದು ಇದ್ದಂತೆ ಇರುವ; ಕೃತ್ರಿಮತೆಯಿಲ್ಲದಿರುವ ಎಂದರ್ಥ. ಸತ್ಯ ಕಾಯಕವೆಂದರೆ ನಮ್ಮ ದೈಹಿಕ–ಮಾನಸಿಕ–ಭಾವಿಕ ಒಲವುಗಳಿಗನುಗುಣವಾಗಿರುವ ಕಾಯಕ; ಅಂದರೆ ಸಹಜ ಕಾಯಕ; ಪ್ರವೃತ್ತಿಗನುಗುಣವಾಗಿರುವ ವೃತ್ತಿ ಸದ್ವೃತ್ತಿ. ಕಾಯಕವು ಸತ್ಯವಾಗಿದ್ದಲ್ಲಿ, ಶ್ರದ್ಧೆ ಅದರಲ್ಲಿ; ಶ್ರದ್ಧೆ ಇರುವಲ್ಲಿ ಸಮೃದ್ಧಿ, ಸಮೃದ್ಧಿ ಇರುವಲ್ಲಿ ವಿಕಾಸ. ನಮ್ಮ ಕಾಯಕಕ್ಕೆ ತಕ್ಕ ಫಲವನ್ನಪೇಕ್ಷಿಸಿದಲ್ಲಿ ಅದು ಸತ್ಯ ಕಾಯಕ. ಕಾಯಕವು ಸತ್ಯವಾಗಿರುವಂತೆ ಶುದ್ಧವೂ ಇರಬೇಕು. ಕಾಯಕದಲ್ಲಿ ಹುಸಿ

ಮೋಸ ವಂಚನೆ ಆಸೆಗಳಿಲ್ಲದಿರುವುದೇ ಶುದ್ಧಕಾಯಕ. ಶಿವ ಭಾವದಿಂದ ಕೂಡಿದ ಕಾಯಕವೇ ಶುದ್ಧಕಾಯಕ. ಸತ್ಯಶುದ್ಧ ಕಾಯಕದಿಂದ ನಮ್ಮ ಬಹಿರಂಗ ಅಂತರಂಗಗಳ ಶುದ್ಧಿ. ಅಂತ ರಂಗ ಬಹಿರಂಗ ಶುದ್ಧಿಯೇ ದೇವನ ಒಲಿಸುವ ಪರಿ. ಅಂತೆಯೇ ಕಾಯಕ ಕೈಲಾಸ; ಕಾಯಕದಿಂದ ಶಿವ–ಸಂಪತ್ತು.

ಪ್ರತಿಯೊಂದು ವಸ್ತು ಸ್ಥೂಲ ಸೂಕ್ಷ್ಮ ಕಾರಣ (ತನು ಮನ ಭಾವ) ತತ್ವಗಳಿಂದ ಕೂಡಿದೆ ಅಥವಾ ಬಹಿರಂಗ ಅಂತರಂಗ ಗಳನ್ನೊಳಗೊಂಡಿದೆ ಎಂದು ವಿವರಿಸುವಲ್ಲಿ ತಾತ್ವಿಕ ಪರಿಕಲ್ಪನೆ ಯಾಗಿಯೂ; ವೀರಶೈವ ಧರ್ಮದ ಅವಿಭಾಜ್ಯ ಅಂಗವಾಗಿ, ಪ್ರತಿಯೊಬ್ಬ ವ್ಯಕ್ತಿಯು ಜೀವನ ಪರ್ಯಂತ ಕಾಯಕಶೀಲನಾಗಿ ಗುರುಲಿಂಗಜಂಗಮ ದಾಸೋಹದ ಮೂಲಕ ಶಿವ ಸಂಪಾದನೆ ಮಾಡಬೇಕೆಂದು ಬೋಧಿಸುವಲ್ಲಿ ಧಾರ್ಮಿಕ ಪರಿಕಲ್ಪನೆಯಾಗಿ ಯೂ, ಕಾಯಕವೆಲ್ಲ ಶಿವಭಾವದಿಂದ ಕೂಡಿರುವುದರಿಂದ ಅದ ರಲ್ಲಿ ಮೈಲಿಗೆ ಮಡಿ, ಮೇಲು ಕೀಳು, ವರ್ಗಕಲಹಗಳಿಲ್ಲವೆಂದು ಸಾರಿ ಹೇಳಿ, ಸಾಮಾಜಿಕ ಸಂಬದ್ಧತೆಯನ್ನು ಸಾಧಿಸುವಲ್ಲಿ ಸಾಮಾಜಿಕ ಪರಿಕಲ್ಪನೆಯಾಗಿಯೂ, ಅರ್ಥಸಂಪಾದನೆ ಮತ್ತು ಅದರ ಬಳಕೆ ನೀತಿಯುಕ್ತವಾಗಿರಬೇಕೆಂದು ಹೇಳುತ್ತ ಬದುಕಿ ಗೊಂದು ಭದ್ರವಾದ ಬುನಾದಿಯನ್ನು ನಿರ್ಮಿಸುವಲ್ಲಿ ನೈತಿಕ ಪರಿಕಲ್ಪನೆಯಾಗಿಯೂ, ಆರ್ಥಿಕ ಸಮೃದ್ಧಿಯೊಂದಿಗೆ ಆರ್ಥಿಕ ಸಮಾನತೆಯನ್ನು ಪ್ರತಿಪಾದಿಸುವಲ್ಲಿ ಆರ್ಥಿಕ ಪರಿಕಲ್ಪನೆಯಾ ಗಿಯೂ—ಹೀಗೆ ಮಾನವಬದುಕಿನ ಎಲ್ಲ ಮುಖಗಳನ್ನು ಆವರಿ ಸಿಕೊಂಡು 'ಕಾಯಕ' ತತ್ವವು ಶರಣರು ಸಲ್ಲಿಸಿದ ವಿಶಿಷ್ಟ ಕೊಡುಗೆಯೆಂಬುದು ವೇದ್ಯವಾಗುತ್ತದೆ.

## ೩. ಕಾಯಕ-ಮೈಲಿಗೆ, ಮಡಿ

ಹನ್ನೆರಡನೆಯ ಶತಮಾನದ ವೇಳೆಗೆ ಪರಂಪರಾನುಗತವಾಗಿ ಬಂದ ವರ್ಣವ್ಯವಸ್ಥೆ ಸಮಾಜ ಜೀವನದಲ್ಲಿ ಆಳವಾಗಿ ಬೇರೂರಿತ್ತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳು ಜೊತೆಗೆ 'ಅಂತ್ಯಜ' (ಅಸ್ಪೃಶ್ಯ) ವೆಂಬ ವರ್ಣವು ಸೇರಿಕೊಂಡು ಸಮಾಜವು ಹೋಳು-ಹೋಳಾಗಿತ್ತು. ಶೂದ್ರ ವರ್ಗದ ಹಾಗೂ 'ಅಸ್ಪೃಶ್ಯ'ವರ್ಗದ ಜನ ಮಾಡುತ್ತಿದ್ದ ಕಸಗೂಡಿಸುವಿಕೆ, ತಳವಾರಿಕೆ, ಕ್ಷೌರಿಕ, ಪಾದರಕ್ಷೆ ತಯಾರಿಕೆ, ಹೆಣ ಸುಡುವಿಕೆ ಮುಂತಾದ ಕೆಲಸಗಳನ್ನು 'ಮೈಲಿಗೆ' ಕೆಲಸಗಳೆಂದೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಉಚ್ಚ ವರ್ಗದ ಜನ ಮಾಡುತ್ತಿದ್ದ ಕೆಲಸಗಳನ್ನು 'ಮಡಿ' ಕೆಲಸಗಳೆಂದೂ ಜನರು ಭಾವಿಸಿದ್ದರು. ತೀವ್ರಗತಿಯಿಂದ ಬದಲಾಗುತ್ತಿರುವ ಇಂದಿನ ಭಾರತೀಯ ಸಮಾಜ ವ್ಯವಸ್ಥೆಯಲ್ಲೂ 'ಮೈಲಿಗೆ' ಹಾಗೂ 'ಮಡಿ'ಕೆಲಸಗಳೆಂದು ವಿಂಗಡಣೆ ಮಾಡುವುದನ್ನು ಕಾಣುತ್ತೇವೆ.

ಕಾಯಕದಲ್ಲಿ ಮೈಲಿಗೆ ಮಡಿ ಭಾವನೆಗಳು ಕೂಡದು ಎಂಬುದಕ್ಕೆ ಶರಣರು,

"ಆವ ಕಾಯಕವ ಮಾಡಿದರೂ ಒಂದೆ ಕಾಯಕವಯ್ಯಾ"

—ಗಂಗಮ್ಮ (ಶಿಶವ; ಪು. ೩೬೩; ವ ೨೧೯)

"ಒಡೆಯರ ಪ್ರಾಣಕ್ಕೆ ಇದ್ದಿತೇ ಯಜ್ಞೋಪವೀತ ?
ಕಡೆಯಲಿದ್ದ ಅಂತ್ಯಜನು ಹಿಡಿದಿದ್ದನೇ ಪ್ರಾಣದಲ್ಲಿ
ಹಿಡಿಗೋಲು ?...

—ದೇವರ ದಾಸಿಮಯ್ಯ (ಸಪುವ–೨; ವ. ೯೦೨)

"ಲಿಂಗವಿದ್ದಲ್ಲಿ ನಿಂದೆಯಿರದು, ನಿಂದೆಯಿದ್ದಲ್ಲಿ
ಲಿಂಗವಿರದು...

—ಬಸವಣ್ಣ (ಬವ; ವ. ೧೩೦೩)

"ಲಿಂಗವಿದ್ದವರ ಮನೆ ಕೈಲಾಸವೆಂದು ನಂಬಬೇಕು...

—ಬಸವಣ್ಣ (ಬವ; ವ. ೬೦೭)

"ಚತುರ್ವೇದಿಯಾದಡೇನು ? ಲಿಂಗವಿಲ್ಲದವನೆ ಹೊಲೆಯ
ಶ್ವಪಚನಾದಡೇನು ? ಲಿಂಗವಿದ್ದವನೆ ವಾರಣಾಸಿ;

—ಬಸವಣ್ಣ (ಬವ; ವ. ೬೦೫)

ಎಂದು ನುಡಿದಿದ್ದಾರೆ. ಒಂದು ಸಮಾಜದ ಬದುಕಿಗೆ ಅಧ್ಯಾಪಕ, ಆಡಳಿತಗಾರ ಇವರ ಸೇವೆ ಎಷ್ಟು ಮುಖ್ಯವೋ ಅಷ್ಟೇ ಒಬ್ಬ ಬೀದಿಯ ಕಸಗೂಡಿಸುವವನ, ಮಡಿವಾಳನ ಸೇವೆ ಮುಖ್ಯ. ಎಲ್ಲರ ಸೇವೆಯೂ ಅಗತ್ಯ ಮಾನವಬದುಕಿಗೆ. ಹೀಗಿರುವಲ್ಲಿ ಮೈಲಿಗೆ, ಮಡಿ ಎಂಬ ಪ್ರಶ್ನೆ ಎಲ್ಲಿ ? ದೇವನನ್ನು ನಂಬಿ ಸತ್ಪಥದಲ್ಲಿ ಬದುಕನ್ನು ಸಾಗಿಸುವವ ಭಕ್ತ. ಇಂಥ ಭಕ್ತ ಕೈಕೊಂಡ ಕಾಯಕದಲ್ಲಿ ಮೈಲಿಗೆ ಎಂಬುದುಂಟೆ ? ಲಿಂಗವಿದ್ದಲ್ಲಿ ಹೊಲೆಯಿಲ್ಲ, ನಿಂದೆಯಿಲ್ಲ, ಮೈಲಿಗೆ ಇಲ್ಲ.

ನಾವು ಕೈಕೊಂಡ ಕಾಯಕದಲ್ಲಿ ಭಾವಶುದ್ಧಿಯಿದ್ದರೆ ಆಯಿತು. ಅದು ಶಿವಪೂಜೆ ಎನ್ನುತ್ತಾನೆ ಡಕ್ಕೆಯ ಬೊಮ್ಮಣ್ಣ:

"ಆವ ಸ್ವಕಾಯಕದಿಂದಾದಡೂ ಆಗಲಿ
ಭಾವಶುದ್ಧವಾಗಿ ಮಾಡುವುದು ಜಂಗಮಪೂಜೆ"

—(ಸಪುವ–೧; ವ. ೮೪೫)

ಶಿವಪೂಜೆಯಲ್ಲಿ ಅಶುಚಿ ಎಂಬುದುಂಟೆ? ನಮ್ಮ ಕಾಯಕದಲ್ಲಿ ಆಸೆ, ಮೋಸ, ವಂಚನೆಗಳಿದ್ದರೆ ಅದು ಮೈಲಿಗೆ. ಅಂತೆಯೇ ಬಸವಣ್ಣನವರು,

"ವಿಪ್ರಮೊದಲು ಅಂತ್ಯಜ ಕಡೆಯಾಗಿ
ಶಿವಭಕ್ತರಾದವರನೆಲ್ಲರನೊಂದೆ ಎಂಬೆ;
ಹಾರುವ ಮೊದಲು ಶ್ವಪಚಕಡೆಯಾಗಿ
ಭವಿಯಾದವರನೆಲ್ಲರನೊಂದೆ ಎಂಬೆ;"

—(ಬವ; ವ. ೭೧೦)

ಎಂದು ನುಡಿದರು, ನಡೆದರು. ಶಿವಭಕ್ತರು ಮಾಡುವ ಕಾಯಕದಲ್ಲಿ ಮೈಲಿಗೆ, ಮಡಿ ಭಾವನೆಗಳು ಸರ್ವಥಾ ಸಲ್ಲವು. ಈ ಭಾವನೆಗಳನ್ನು ಜನಮನದಿಂದ ಬೇರುಸಹಿತ ನಿರ್ಮೂಲ ಮಾಡಲು ಬಸವಣ್ಣನವರು,

"ಹೊಲೆಯ ಮಾದಿಗ ಭಕ್ತನಾದಡೆ ಆತನ ಮನೆಯು ಸೊಣಗಂಗೆ
ಪಂಚ ಮಹಾವಾದ್ಯದಲ್ಲಿ ಸನ್ಮಾನವ ಮಾಡೆನೆ?"

(ಬವ; ವ. ೫೯೫)

"ಆವನಾದಡೇನು ಶ್ರೀಮಹಾದೇವನ ನೆನೆವನ ಬಾಯ ತಂಬುಲವ
ಮೆಲುವೆ, ಬೀಳುಡಿಗೆಯ ಹೊದೆವೆ,

ಪಾದರಕ್ಷೆಯ ಕಾಯಕದಿಂದ ಬದುಕುವೆ"

(ಬವ ;ವ. ೪೬೩)

ಎಂದೂ ಸಾರಿದರು. ಹೀಗೆ ಶರಣರು ಕಾಯಕದಲ್ಲಿ ಮೈಲಿಗೆ, ಮಡಿ ಭಾವನೆಯನ್ನು ತೊಡೆದು ಹಾಕಿ, ಸಾಮಾನ್ಯ ಹಾಗೂ ಸ್ವಯಂ ಶ್ರೇಷ್ಠರೆಂದು ಕರೆದುಕೊಳ್ಳುತ್ತಿದ್ದ ಜನರ ದೃಷ್ಟಿಯಲ್ಲಿ ಮೈಲಿಗೆ ಕೆಲಸಗಳೆನಿಸಿದ್ದ ಬಟ್ಟೆ ತೊಳೆಯುವಿಕೆ, ಚರ್ಮಹದ ಮಾಡುವಿಕೆ ಪಾದರಕ್ಷೆ ತಯಾರಿಕೆ, ಕಸಗುಡಿಸುವಿಕೆ ಮುಂತಾದ ಕೆಲಸಗಳನ್ನು ಕೈಕೊಂಡು ಅವುಗಳನ್ನು ಕಾಯಕಗಳನ್ನಾಗಿ ಪರಿವರ್ತಿಸಿದರು. ಡೋಹರ ಕಕ್ಕಯ್ಯ, ಮಡಿವಾಳ ಮಾಚಯ್ಯ, ಸಮಗಾರ ಹರಳಯ್ಯ, ಮೋಳಿಗೆ ಮಾರಯ್ಯ, ಕಸಗುಡಿಸುವ ಸತ್ಯಕ್ಕ ಮುಂತಾದ ಶರಣ ಶರಣೆಯರು ಬಸವಣ್ಣ ಸ್ಥಾಪಿಸಿದ ಅನುಭವ ಮಂಟಪದಲ್ಲಿ ಬಿಜ್ಜಳನ ಅರ್ಥ ಮಂತ್ರಿಯಾಗಿದ್ದ ಬಸವಣ್ಣನ ಸರಿಜೋಡಿ ಗೋಷ್ಠಿಯಲ್ಲಿ ಭಾಗವಹಿಸಿ ಆತನಿಗೆ ಆದರ್ಶಪ್ರಾಯವಾದರು.

ಸಮಾಜದ ಮುಂದಾಳುಗಳೆನಿಸಿಕೊಳ್ಳುವವರೂ ಸಹ ಇಂದು ಕೆಲಸಗಳಲ್ಲಿ ಮೈಲಿಗೆ, ಮಡಿ ಎಂಬ ಭಾವವನ್ನು ವ್ಯಕ್ತಪಡಿಸಿ ಸಾಮಾಜಿಕ ಅತೃಪ್ತಿ ಇನ್ನೂ ಬಲಗೊಳ್ಳುವಂತೆ ಮಾಡುತ್ತಿದ್ದಾರೆ. ಇಂಥವರಿಗೆ ಶರಣರ 'ಕಾಯಕ ತತ್ವ' ಮಾರ್ಗದರ್ಶನೀಯ.

## ೪. ಕಾಯಕ–ಅಂತಸ್ತು

ಭಾರತದ ಇಂದಿನ ಸಮಾಜ ವ್ಯವಸ್ಥೆಯನ್ನು ಕುರಿತುಅಭ್ಯಾಸ ಮಾಡುವವರು ವ್ಯಕ್ತಿಯ ಉದ್ಯೋಗಕ್ಕೂ ಅವನ ಸಾಮಾಜಿಕ ಅಂತಸ್ತಿಗೂ ನಂಟನ್ನು ಕಲ್ಪಿಸಲು ಪ್ರಯತ್ನಿಸುತ್ತಿದ್ದಾರೆ. ವ್ಯಕ್ತಿಯ ಉದ್ಯೋಗ ಅವನ ಸಾಮಾಜಿಕ ಅಂತಸ್ತನ್ನು ನಿರ್ಧರಿಸುತ್ತದೆ ಎಂಬುದು ಅವರ ಅಭಿಮತ. ಕಸಗುಡಿಸುವಿಕೆ, ತಳವಾರಿಕೆ, ಬಟ್ಟೆ ತೊಳೆಯುವಿಕೆ, ಮುಸುರಿ ಪಾತ್ರೆ ತೊಳೆಯುವಿಕೆ, ಕ್ಷೌರಿಕ, ಪಾದರಕ್ಷೆ ತಯಾರಿಕೆ, ಮುಂತಾದ ಕೆಲಸಗಳು ಕೀಳು; ಅವುಗಳನ್ನು ಮಾಡುವವರ ಸಾಮಾಜಿಕ ಅಂತಸ್ತು ಕಡಿಮೆ. ಹಾಗೇನೆ ಅಧ್ಯಾಪನ, ಆಡಳಿತ, ವೈದ್ಯಕೀಯ, ವಕೀಲಿ ಮುಂತಾದ ಉದ್ಯೋಗಗಳು ಮೇಲು; ಅವುಗಳನ್ನು ಮಾಡುವವರ ಸಾಮಾಜಿಕ ಅಂತಸ್ತು ಹೆಚ್ಚು ಎಂಬುದು ಸಮಾಜಶಾಸ್ತ್ರ ಪಂಡಿತರ ವಿಶ್ಲೇಷಣೆ. ಆದರೆ ವ್ಯಕ್ತಿಯ ಅಂತಸ್ತು ಅವನು ಮಾಡುವ ಕಾಯಕದಿಂದ ನಿರ್ಧರಿಸಲ್ಪಡುವುದಿಲ್ಲವೆಂಬುದು ಶರಣರ ನಿಶ್ಚಳ ಅಭಿಮತ. ಶಿವಭಾವವನ್ನೊಳಗೊಂಡ ಕಾಯಕವೇ ಕೈಲಾಸವೆಂದು ಸಾರಿದ ಶರಣರಿಗೆ ಕಾಯಕದಲ್ಲಿ ಮೇಲು–ಕೀಳುಗಳನ್ನರಸುವುದು ಸರ್ವಥಾ ಸಲ್ಲದು. ಅಂತೆಯೇ ಬಸವಣ್ಣನು;

"ದೇವ ಸಹಿತ ಭಕ್ತ ಮನೆಗೆ ಬಂದಡೆ
ಕಾಯಕವಾವುದೆಂದು ಬೆಸಗೊಂಡೆನಾದಡೆ
ನಿಮ್ಮಾಣೆ; ನಿಮ್ಮ ಪುರಾತನರಾಣೆ; ತಲೆದಂಡ ತಲೆದಂಡ"
(ಬವ; ವ. ೪೫೨)

"ಕಳ್ಳಬಂದಿಕಾರ, ಹಾವಡಿಗ, ಹಾದರಿಗ,
ಬಂಟನೋಲಯಕಾರನೆಂದರೆನಾದಡೆ,
ನೀ ಮುಂತಾಗಿ ಬಂದ ಭಕ್ತರ ನೀ ಎನ್ನದಿದ್ದಡೆ, ಅದೇ
ದ್ರೋಹ"
(ಬವ; ವ. ೭೧೮)

"ಇದು ಕಾರಣ, ಅನ್ನ ವಸ್ತ್ರಧನ ಮಾಟದಲ್ಲಿ
ಎರಡಾಗಿ ಕಂಡೆನಾದಡೆ ನರಕದಲ್ಲಿಕ್ಕುವ, ಕೂಡಲ
ಸಂಗಮದೇವ...
(ಬವ; ವ. ೪೧೧)

ಎಂದು ನುಡಿದಿದ್ದಾನೆ. ಶರಣರ ವಿಚಾರದ ಪ್ರಾತಿನಿಧಿಕ ನುಡಿಗಳಾಗಿವೆ ಅಣ್ಣ ಬಸವಣ್ಣನ ಈ ನುಡಿಗಳು. ವ್ಯಕ್ತಿಯ ಅಂತಸ್ತನ್ನು ಅವನ ವಿಚಾರ ಹಾಗೂ ಆಚಾರಗಳು ನಿರ್ಧರಿಸುತ್ತವೆ ಎಂಬುದು ಶರಣರ ಅನುಭವ. ನಮ್ಮ ನುಡಿ ಹಾಗೂ ನಡೆ ಇವುಗಳು ನಾವು ಎಂಥವರು ಎಂಬುದನ್ನು ವ್ಯಕ್ತಪಡಿಸುತ್ತವೆ. ನಾವು ಸುವಿಚಾರಿಗಳಾಗಿ, ಸದಾಚಾರಿಗಳಾದರೆ ನಮಗೆ ಘನತೆ, ಗೌರವ, ಅಂತಸ್ತು; ಕುವಿಚಾರಿಗಳಾಗಿ ದುರಾಚಾರಿಗಳಾದರೆ ನಮ್ಮ ಅಧಃಪತನ. ವ್ಯಕ್ತಿಯ ಹಿರಿತನವನ್ನು ಕುರಿತು ಬಸವಣ್ಣನವರು,

"ವೇದ ಶಾಸ್ತ್ರ ಆಗಮಂಗಳನೋದಿದವರು ಹಿರಿಯರೆ?
ಕವಿ ಗಮಕಿ ಗೀತವಾದಿ ವಾಗ್ಮಿಗಳು ಹಿರಿಯರೆ?"

ಎಂದು ಪ್ರಶ್ನಿಸಿ,

"ಹಿರಿಯತನವಾವುದೆಂದಡೆ : ಗುಣ ಜ್ಞಾನ ಆಚಾರ
ಧರ್ಮ,
ಕೂಡಲಸಂಗನ ಶರಣರು ಸಾಧಿಸಿದ ಸಾಧನೆಯೆ
ಹಿರಿಯತನ"
(ಬವ;ವ. ೧೨೧೧)

ಎಂದು ತಾವೇ ಉತ್ತರ ನೀಡಿದ್ದಾರೆ.

ಕೆಲಸಗಳಲ್ಲಿ ಮೈಲಿಗೆ ಮಡಿ, ಮೇಲು ಕೀಳು ಎಂದು ವಿಂಗಡಣೆ ಮಾಡಿ 'ಸಾಮಾಜಿಕ ಅತೃಪ್ತಿ'ಯನ್ನು ಸಮಾಜದಲ್ಲಿ ಬಿತ್ತಿ ಬೆಳೆಯುತ್ತ 'ನಾಗರಿಕ'ರೆಂದೆನಿಸಿಕೊಳ್ಳುವ, ಇಂದಿನ ನಮಗೆ ಶರಣರ ವಿಚಾರಗಳು ತುಂಬ ಮನನೀಯ ಹಾಗೂ ಅನುಸರಣೀಯ.

## ೫. ಕಾಯಕ-ವರ್ಗಕಲಹ

ಬಂಡವಾಳಶಾಹಿ ಪದ್ಧತಿಯಿಂದ ಒಡೆಯರ ವರ್ಗ– ಉತ್ಪಾದನಾ ಪಟಕಗಳ ಒಡೆತನವನ್ನು ಹೊಂದಿದವರು–ಮತ್ತು ಕೂಲಿಕಾರವರ್ಗ–ತಮ್ಮ ಶ್ರಮವನ್ನು ಮಾರಿಕೊಳ್ಳುವವರು– ಎಂಬ ಎರಡು ವರ್ಗಗಳು ನಿರ್ಮಾಣಗೊಂಡು ಅವುಗಳಲ್ಲಿ ಕಲಹ (ಘರ್ಷಣೆ) ಏರ್ಪಡುತ್ತದೆ. ಎಲ್ಲಿಯವರೆಗೆ ಈ ವರ್ಗಕಲಹ ಇರುತ್ತದೆಯೋ ಅಲ್ಲಿಯವರೆಗೆ ಸಮಾಜದಲ್ಲಿ ಅಸಂತೃಪ್ತಿ. ಒಡೆ

ಯಿನ ವರ್ಗ ಸತತವಾಗಿ ಬಲಿಷ್ಠವಾಗುತ್ತ ಕೂಲಿಕಾರವರ್ಗವನ್ನು ಶೋಷಿಸುತ್ತದೆ. ಇದನ್ನು ಕೂಲಿಕಾರವರ್ಗ ಪ್ರತಿಭಟಿಸುತ್ತದೆ. ಈ ತೆರನ ವರ್ಗಣೆಯಿಂದ ಮತ್ತೊಂದು ಅರ್ಥವ್ಯವಸ್ಥೆ ಉದಿಸುತ್ತದೆ. ಅದುವೆ ಸಮಾಜವಾದ ಪದ್ಧತಿ. -ಇದು ಹತ್ತೊಂಬತ್ತನೆ ಶತಕದ ಸುಪ್ರಸಿದ್ಧ ಅರ್ಥಶಾಸ್ತ್ರಜ್ಞ ಮಾರ್ಕ್ಸ್‌ನ ಅಭಿಮತ, ಇದನ್ನು 'ಮಾರ್ಕ್ಸ್‌ವಾದ' ವೆಂದೂ ಕರೆಯುತ್ತಾರೆ. ಮಾರ್ಕ್ಸ್‌ವಾದದಲ್ಲಿ ವರ್ಗಕಲಹವಿಲ್ಲ; ಶೋಷಣೆಯಿಲ್ಲ. ಆರ್ಥಿಕ ಸಮತೆ ಅದರ ತಳಹದಿ. ಆರ್ಥಿಕ ವಿಷಮತೆ, ವರ್ಗ ಕಲಹ ಶೋಷಣೆ ಅಶಾಂತಿ,ಇವುಗಳ ನಿರ್ಮೂಲನಕ್ಕೆ ತನ್ನ ವಾದವೊಂದೇ ಪರಿಹಾರ ಮಾರ್ಗವೆಂದು ಮಾರ್ಕ್ಸ್ ಸೂಚಿಸಿದನು. ಹನ್ನೆರಡನೆಯ ಶತಮಾನದ ಶರಣರು ಎಲ್ಲ ದೋಷಗಳಿಂದ ವಿಮುಕ್ತವಾದ ಹಾಗೂ ಸಮೃದ್ಧಿ ಮತ್ತು ಶಾಂತಿಯನ್ನು ದೊರಕಿಸುವ ವಿನೂತನವಾದ ಅರ್ಥವ್ಯವಸ್ಥೆಯ ಸ್ಥಾಪನೆಗೆ ತಮ್ಮದೇ ಆದ 'ವಾದ' ವೊಂದನ್ನು ಮಂಡಿಸಿದರು. ಅದನ್ನು ನಾವು ಇಂದು 'ಶರಣವಾದ' ಎಂದು ಕರೆದರೆ ತಪ್ಪಾಗಲಾರದು. ಶರಣವಾದದಲ್ಲಿ ಬಂಡವಾಳಶಾಹಿ ಪದ್ಧತಿಯ 'ಉದ್ಯಮ ಸ್ವಾತಂತ್ರ್ಯ' ಹಾಗೂ ಸಮಾಜವಾದ ಪದ್ಧತಿಯ 'ಆರ್ಥಿಕ ಸಮತೆ'ಯ ಲಕ್ಷಣಗಳನ್ನು ಕಾಣುತ್ತೇವೆ. 'ಭೌತಿಕವಾದವೇ ತಳಹದಿಯಾಗಿ ಆರ್ಥಿಕಾಭಿವೃದ್ಧಿ ಮತ್ತು ಆರ್ಥಿಕ ಸಮತೆಗಳಷ್ಟೇ ಗುರಿಯಾಗಿರುವ ಮಾರ್ಕ್ಸ್‌ವಾದದ ಪರಿಯಂತಲ್ಲ ಶರಣವಾದ. ಆಧ್ಯಾತ್ಮವೇ ತಳಹದಿಯಾಗಿ, ಆರ್ಥಿಕ ಅಭ್ಯುದಯದೊಂದಿಗೆ ಆರ್ಥಿಕ ಸಮತೆ, ಶಾಂತಿ ಹಾಗೂ 'ಆತ್ಮವಿಕಸನ' ಗಳು ಗುರಿಯಾಗಿರುವ ವಾದ ಶರಣವಾದ.

ಶರಣವಾದದಲ್ಲಿ ವರ್ಗಕಲಹಕ್ಕೆ ಆಸ್ಪದವಿಲ್ಲ. ಕೆಳಗಿನ ನಿರೂಪಣೆಯಿಂದ ಈ ವಿಷಯ ವೇದ್ಯವಾಗುವುದು: ಪ್ರತಿಯೊಬ್ಬ ವ್ಯಕ್ತಿಯು ತನ್ನ ದೈಹಿಕ-ಮಾನಸಿಕ-ಭಾವಿಕ ಒಲವುಗಳಿಗನುಗುಣವಾಗಿ ಒಂದಿಲ್ಲೊಂದು ಕಾಯಕವನ್ನು ಕೈಕೊಂಡು ಸತ್ಪಥದಲ್ಲಿ ನಡೆದು ಶಿವಸಂಪಾದನೆ' ಮಾಡಬೇಕೆಂಬುದು ಶರಣರ ಅಭಿಮತ. ಯಾವುದೆ ಕಾಯಕವನ್ನು ಕೈಕೊಂಡರೂ, ಶಿವ-ಜೀವ ಸಾಮರಸ್ಯವನ್ನು ಸಾಧಿಸುವುದು ಜೀವಿಯ ಪರಮಗುರಿ' ಶರಣರ ದೃಷ್ಟಿಯಲ್ಲಿ, ಈ ಭಾವದಿಂದ ಎಲ್ಲರೂ ಕಾಯಕಶೀಲರಾದಾಗ, ಇವ ದುಡಿಸಿಕೊಳ್ಳುವವ–ಒಡೆಯ-ಅವ ದುಡಿಯುವವ–ಕೂಲಿಕಾರ ಎಂಬ ಭಾವನೆ ತಲೆದೋರದು. ಎಲ್ಲರ ಒಡೆಯನೊಬ್ಬನಿದ್ದಾನೆ, ಅವನ ಒಲುಮೆಯನ್ನು ನಾವೆಲ್ಲರೂ ಸಾಧಿಸಬೇಕೆಂಬ ಭಾವನೆಯಿಂದ ಕಾಯಕವನ್ನು ಕೈಕೊಳ್ಳಬೇಕು. ದೇಶದ ಸಂಪತ್ತಿನ ಉತ್ಪಾದನೆಗೆ ಎಲ್ಲರ–ಒಡೆಯರ ಹಾಗೂ ಕೂಲಿಕಾರರ–ಸೇವೆಗಳು ಅವಶ್ಯವೆಂದು ಆರ್ಥಿಕ ಚಟುವಟಿಕೆಗಳನ್ನು ಕೈಕೊಂಡಾಗ ಅವೆಲ್ಲವೂ ಸಹಕಾರಿ ಉದ್ಯಮ'ಗಳಾಗಿ ಪರಿಣಮಿಸುತ್ತವೆ. ಇಂಥ ಸಹಕಾರಿ ಉದ್ಯಮಗಳಲ್ಲಿ ಅವರವರ ಶ್ರಮಕ್ಕೆ ತಕ್ಕ ಪ್ರತಿ ಫಲವನ್ನು ಅವರವರು ಅಪೇಕ್ಷಿಸಿದಾಗ ಶೋಷಣೆಯೆಂಬುದಿಲ್ಲ. ಶೋಷಣೆಯಿಲ್ಲದಲ್ಲಿ ವರ್ಗಕಲಹವೆಂಬುದಿಲ್ಲ. ಹೀಗೆ ಶರಣರು ಬೋಧಿಸಿದ ಕಾಯಕ ತತ್ವದ ಪರಿಪಾಲನೆಯಿಂದ ಬಂಡವಾಳ ಶಾಹಿ ಪದ್ಧತಿಯಲ್ಲಿ ಕಂಡುಬರುವ ವರ್ಗಕಲಹವನ್ನು ತೊಡೆದು ಹಾಕಬಹುದು.

## ೬. ಕಾಯಕ–ಬದುಕು

ಸಮಾಜದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯು–ದುಡಿಯುವ ಸಾಮರ್ಥ್ಯವನ್ನು ಹೊಂದಿದ–ತನ್ನ ದೇಹಸಾಮರ್ಥ್ಯ ಹಾಗೂ ಮನೋಧರ್ಮಕ್ಕನುಗುಣವಾಗಿ ಒಂದಿಲ್ಲೊಂದು ಕಾಯಕವನ್ನ ವಲಂಬಿಸಿ ಬದುಕನ್ನು ಸಾಗಿಸಬೇಕೆಂಬುದು ಶರಣರ ಮತ. ಕಾಯಕ ಜೀವಿ ಮಾತ್ರ ಪ್ರಸಾದಕ್ಕೆ ಯೋಗ್ಯ. ಅಂತೇನೆ ಶರಣರು,

"ಗುರುವಾದಡು ಕಾಯಕದಿಂದವೆ ಜೀವನ್ಮುಕ್ತಿ;
ಲಿಂಗವಾದಡು ಕಾಯಕದಿಂದವೆ ಶೀಲಕುಲ ಹರಿವುದು;
ಜಂಗಮವಾದಡೂ ಕಾಯಕದಿಂದವೆ ವೇಷದ ಪಾಶ
ಹರಿವುದು;

–ನುಲಿಯ ಚಂದಯ್ಯ (ಸಪುವ-1; ವ. ೧೨೩೨)

"ಕಾಯಕವೆ ಕೈಲಾಸವಾದ ಕಾರಣ
ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು"

–ಆಯ್ದಕ್ಕಿ ಮಾರಯ್ಯ (ಸಪುವ-೧, ವ. ೧೨೭೫)

ಎಂದು ಉದ್ಘೋಷಿಸಿದ್ದಾರೆ, ಕಾಯಕ ಮಂತ್ರವನ್ನು. ಶಿಷ್ಯನ ಅಜ್ಞಾನವನ್ನು ದೂರಮಾಡಿ ಅವನನ್ನು ಸುಜ್ಞಾನಿಯನ್ನಾಗಿ ಮಾಡುವುದು ಗುರುವಿನ ಕಾಯಕ. ಹಾಗೆ ಮಾಡದಿದ್ದಲ್ಲಿ ಗುರುವು ಗುರುವಲ್ಲ, ಲಿಂಗ(ದೇವ)ವು ಭಕ್ತರ ಪೂಜೆಯನ್ನು ಕೈಕೊಂಡು ಅವರ ಇಷ್ಟಾರ್ಥಗಳನ್ನು ಪೂರೈಸಬೇಕು. ಇದು

ಲಿಂಗದೇವನ ಕಾಯಕ. ಹಾಗೆ ಮಾಡದಿದ್ದಲ್ಲಿ ಲಿಂಗವು ಲಿಂಗವಲ್ಲ;ಅದು ಶಿಲೆ. ಭಕ್ತರ ಅರೆಕೊರೆಗಳನ್ನು ತಿದ್ದಿ ಅವರನ್ನು ಪರಿಪೂರ್ಣದೆಡೆಗೆ ಸಾಗಿಸುವುದು ಜಂಗಮನ ಕಾಯಕ. ಹೀಗೆ ಗುರು ಲಿಂಗ(ದೇವ) ಜಂಗಮರು ತಮ್ಮ ತಮ್ಮ ಕಾಯಕದಲ್ಲಿ ನಿರತರಾಗಿದ್ದರೆ ಅವರು ಪೂಜೆಗೆ ಸೇವೆಗೆ, ಪ್ರಸಾದಕ್ಕೆ ಯೋಗ್ಯರು. ಕಾಯಕದಲ್ಲಿ ನಿರತನಾಗದ ಗುರು ನರ, ಕಾಯಕದಲ್ಲಿ ನಿರತನಾಗದ ದೇವ, ದಾನವ; ಕಾಯಕದಲ್ಲಿ ನಿರತನಾಗದ ಜಂಗಮ, ವಿಹಂಗಮ, ಹಾಗೇನೆ ಕಾಯಕವಿಲ್ಲದ ನರ, ವಾನರ. ಇದು ಶರಣರ ಕಾಯಕ, ದೃಷ್ಟಿ. ಪ್ರತಿಯೊಬ್ಬ ವ್ಯಕ್ತಿಯು ಕಾಯಕದಿಂದಲೇ ತನ್ನ ಉದರ ಪೋಷಣೆ ಮಾಡಬೇಕು. 'ದುಡಿಯುವವನಿಗಷ್ಟೇ ಅನ್ನ' ಎನ್ನುವ ಇಂದಿನ ಸಮತಾವಾದದ ಜೀವನ ಸೂತ್ರ, ಶರಣರ ಕಾಯಕಮಂತ್ರದ ಛಾಯೆಯುಷ್ಟೆ.

ಕಾಯಕದ ನಿಮಿತ್ತ ಪ್ರತಿಯೊಬ್ಬ ವ್ಯಕ್ತಿಯು ಉದ್ಯೋಗಶೀಲನಾಗಿ ಸ್ವಾವಲಂಬಿಯಾಗುತ್ತಾನೆ. ಕಾಯಕಶೀಲನಾಗದೆ ಪರಾವಲಂಬಿಯಾಗಿ ಬದುಕುವವನನ್ನು ಕುರಿತು ಶರಣರು,

"ಹುಸಿ ವೇಷವ ತೊಟ್ಟು ಅಸುವ ಹೊರೆವವನ
ಘಟ ಪಿಸಿತದ ಲೆತ್ತಿಯಂತೆ"

—ಮಧುವಯ್ಯ (ಸಪುವ-೧. ವ ೧೬೪)

"ಹುಸಿದು ಸರ್ವರ ವಂಚಿಸಿ, ಪಿಸುಣತನದಿಂದ ಕಾಡಿಬೇಡಿ
ತಂದವನ ಮನೆಯನ್ನು ಕಿಸುಕುಳಕೆ ಸರಿ"

—ಕೋಲಶಾಂತಯ್ಯ (ಸಪುವ-೧; ವ. ೭೨)

ಎಂದು ಕಟುವಾಗಿ ಟೀಕಿಸಿದ್ದಾರೆ. "ಛಲಬೇಕು ಶರಣಂಗೆ ಪರಧನವನೊಲ್ಲೆಂಬ" (ಬವ. ವ. ೬೭೬) "ಉರಿಬರಲಿ, ಸಿರಿ ಬರಲಿ—'ಬೇಕು, ಬೇಡೆನ್ನೆನಯ್ಯ. ಆನು ನಿಮ್ಮ ಹಾರೆನು, ಮಾನವರ ಬೇಡೆನು (ಬವ. ವ. ೬೯೫) ಎಂಬ ಬಸವಣ್ಣನ ಛಲದ ನುಡಿಗಳಲ್ಲಿ ಸ್ವಾವಲಂಬನೆಯ ಭಾವ ಗರಿಗಟ್ಟಿ ನಿಂತಿದೆ.

ನಾವು ಜೀವನ ಪರ್ಯಂತ ಕಾಯಕಶೀಲರಾಗಿ ಬದುಕ
ಬೇಕೆಂಬುದೂ ಶರಣರವಾದ.

"ಕಾಯವಿಡಿದಿಹನ್ನಬರ ಶಿವಭಕ್ತಂಗೆ ಕಾಯಕವೆ
ಕೈಲಾಸ
ಕಾಯಕವಿಲ್ಲದವನ ಅರಿವು ವಾಯುವಾಯಿತ್ತು
(ಸಪುವ—೧. ವ. ೧೩೫೪)

ಎಂದು ಮನಸಂದ ಮಾರಿತಂದೆ ಶರಣ ಅಭಿಪ್ರಾಯಪಡುತ್ತಾನೆ. ಕಾಯಕವಿರುವನಕ ಕ್ರಿಯೆ, ಕ್ರಿಯೆಯಿರುವನಕ ಕಾಯಕ. ಕಾಯಕದಿಂದಲೇ ಕಾಯ; ಕಾಯಕವಿಲ್ಲದಿರೆ ಕಾಯವಿರದು. ಇಂದು ಸರಕಾರೀ ಹಾಗೂ ಖಾಸಗಿ ಸಂಸ್ಥೆಯ ಉದ್ಯೋಗಗಳ ಲ್ಲಿದ್ದು ೫೫-೬೦ ವರ್ಷಗಳಿಗೆ ನಿವೃತ್ತಿ ಹೊಂದಿ ಉಳಿದ ಜೀವನ ಪರ್ಯಂತ ಪರಾವಲಂಬಿಗಳಾಗಿ ಬದುಕುವ ನಾವು ಸಮಾಜಕ್ಕೆ ಹೊರೆಯಲ್ಲದೆ ಮತ್ತೇನು ?

## ೭. ಸ್ವಾರ್ಜಿತ ಕಾಯಕ—ನಿರುದ್ಯೋಗ

ಶರಣರ ಆರ್ಥಿಕ ಚಿಂತನೆಯು ಸಮಾಜದಲ್ಲಿಯ ನಿರು ದ್ಯೋಗಿ ಸಮಸ್ಯೆಯನ್ನು ಹೇಗೆ ಪರಿಹರಿಸಬಹುದೆಂಬ ವಿಚಾರ

ಗಳನ್ನೂ ಒಳಗೊಂಡಿದೆ. ಪ್ರಸ್ತುತ ವಿಭಾಗದಲ್ಲಿ ಈ ವಿಷಯ ಕುರಿತು ಪರಿಶೀಲಿಸುವಾ. ವ್ಯಕ್ತಿಯು ಕಾಯಕಕ್ಕೆ" ಪರರನ್ನು ಅವಲಂಬಿಸಿಯೇ ಇರಬೇಕಾದುದಿಲ್ಲ. ಸ್ವಂತವಾಗಿಯೂ ಕಾಯಕವನ್ನು ಕಲ್ಪಿಸಿಕೊಳ್ಳುವವನಾಗಬೇಕು. ಇದು ಶರಣರ ತತ್ವ. ಸ್ವಾರ್ಜಿತ ಕಾಯಕಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ ಶರಣರು. ಸ್ವಕಾಯಕವನ್ನು ಕುರಿತು ಶರಣರು,

"ಆವ ಸ್ವಕಾಯಕದಿಂದಾದಡೂ ಆಗಲಿ
ಭಾವಶುದ್ಧವಾಗಿ ಮಾಡುವುದು ಜಂಗಮಪೂಜೆ''
—ಡಕ್ಕೆಯ ಬೊಮ್ಮಣ್ಣ (ಸಪುವ-೧, ವ. ೮೪೫)

"ವ್ರತಸ್ಥನಾಗಿ ಭವಿಗಳ ಕೆಳಗೆ
ಬೊಕ್ಕಸ ಭಂಡಾರ ಅಸಿಕೃಷಿ ವಾಣಿಜ್ಯ ಮುತಾದ
ಕಾಯಕವ ಬಿಟ್ಟು
ತನ್ನ ಸ್ವಕಾಯದಿಂದ ಬಂದು ಒದಗಿದ ದ್ರವ್ಯವ .....
ಏಲೇಶ್ವರದ ಕೇತಯ್ಯ(ಸಪುವ–೧ ವ. ೧೬೩೨)

ಎಂದು ನುಡಿದಿದ್ದಾರೆ. 'ಭವಿಗಳ ಕೆಳಗೆ' ಎನ್ನುವಲ್ಲಿ 'ವಾಮ ಮಾರ್ಗದಿಂದ ಅರ್ಥ ಸಂಪಾದನೆ ಮಾಡುವವರಲ್ಲಿ ಎಂದರ್ಥ. ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಡುವಲ್ಲಿ ಅಸಮರ್ಥವಾದ ಇಂದಿನ ಸರಕಾರಗಳು ಜನರು ಸ್ವದತ್ತವೃತ್ತಿಯನ್ನು ಹೊಂದಲು ಪ್ರಚೋದಿಸುತ್ತಿವೆ. ಧನಸಹಾಯದಿಂದ ಜನರನ್ನು ಸ್ವಾವಲಂಬಿಯಾಗುವಂತೆ ಸರಕಾರವು ಉತ್ತೇಜನ ನೀಯುವ ಇಂದಿನಯುಗದಲ್ಲಿ ಶರಣರ ಸ್ವದತ್ತ ಕಾಯಕ ವಿಚಾರ ತುಂಬಾ ಆಪ್ಯಾಯನ.

ಸ್ವಾರ್ಜಿತ ಕಾಯಕಕ್ಕೆ ಪೂರಕವೆಂಬಂತೆ. ಶರಣರು ಶ್ರಮ ಬಾಹುಳ್ಯ ಉದ್ಯಮಗಳಾದ ಗುಡಿ ಕೈಗಾರಿಕೆ ಹಾಗೂ ಹಳ್ಳಿಯ ಕಸಬುಗಳಿಗೆ ಹೆಚ್ಚಿನ ಗಮನವನ್ನು ಕೊಟ್ಟಿದ್ದಾರೆ. ಶರಣರು ಕೈಕೊಂಡ ಕಾಯಕಗಳನ್ನು ಸ್ಥೂಲವಾಗಿ ಕೆಳಗಿನಂತೆ ವಿಂಗಡಿಸ ಬಹುದು.

೧. ಶಾರೀರಿಕ ಶ್ರಮದಿಂದ ಕೂಡಿದ ಕಾಯಕಗಳು :
ಉದಾ : ಮಡಿವಾಳಿಕೆ, ತಳವಾರಿಕೆ, ದನಕಾಯು ವಿಕೆ, ಕೊಟ್ಟಣಿಕೆ ಇತ್ಯಾದಿ.

೨. ಅಲ್ಪ ಬಂಡವಾಳದಿಂದ ಕೂಡಿದ ಕಾಯಕಗಳು :
ಉದಾ : ಕುಂಬಾರಿಕೆ, ನೂಲುವಿಕೆ, ನೆಯಿಗೆ, ಎಣ್ಣೆ ತೆಗೆಯುವದು ಇತ್ಯಾದಿ.

೩. ಅಲ್ಪ ಬಂಡವಾಳ ಮತ್ತು ಇತರರ ಶ್ರಮದಿಂದ ಕೂಡಿದ ಕಾರ್ಯಕ್ರಮಗಳು : ಉದಾ : ಗಾಜಲ ಗಾರಿಕೆ, ಅಂಬಿಗತನ, ಒಕ್ಕಲುತನ, ಕಮ್ಮಾರಿಕೆ, ಬಡಿಗತನ ಇತ್ಯಾದಿ.

೪. ಹೆಚ್ಚಿನ ಬಂಡವಾಳದಿಂದ ಕೂಡಿದ ಕಾಯಕಗಳು :
ಉದಾ : ಮುತ್ತು ರತ್ನ, ಬಂಗಾರ ಇವುಗಳ ವ್ಯಾಪಾರ.

ಶರಣರ ಕಾಯಕಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಅವರು ಶ್ರಮಬಾಹುಳ್ಯ ಉದ್ಯಮಗಳಿಗೆ ಹೆಚ್ಚಿನ ಲಕ್ಷ್ಯಕೊಟ್ಟಿರು ವುದನ್ನು ನಾವು ಕಾಣಬಹುದು. ಗಾಜಲ ಬೊಮ್ಮಯ್ಯ ಮೊದ ಲಾದ ಶರಣರು ಕಚ್ಚಾವಸ್ತು ದೊರೆಯುವ ಸ್ಥಳಗಳಲ್ಲಿ ಕಾರ್ಯ

ಗಾರಗಳನ್ನು ಸ್ಥಾಪಿಸಿ ಅವುಗಳಲ್ಲಿ ಜನರಿಗೆ ಕೈಗಾರಿಕೆಯ ಶಿಕ್ಷಣ ವನ್ನು ಕೊಟ್ಟು ದೇಶದ ಸಂಪದಭ್ಯುದಯಕ್ಕೆ ಕಾರಣೀಭೂತ ರಾದರು. ಶ್ರಮ ಬಾಹುಳ್ಯ ಉದ್ಯಮಗಳಾದ ಗುಡಿಕೈಗಾರಿಕೆ ಹಾಗೂ ಹಳ್ಳಿಯ ಕಸಬುಗಳಿಗೆ ಮಹತ್ವವನ್ನು ಕೊಟ್ಟ ಶರಣರ ವಿಚಾರ ಸಂಖ್ಯಾಧಿಕ್ಯದಿಂದ ನಿರುದ್ಯೋಗ ಸಮಸ್ಯೆಯನ್ನು ಎದು ರಿಸುವ ಭಾರತದಂಥ ರಾಷ್ಟ್ರಗಳಿಗೆ ಸ್ವಾಗತಾರ್ಹ. ಗಾಂಧೀಜಿ ಯವರು ಸಹ, ಶರಣರಂತೆ, ಗುಡಿಕೈಗಾರಿಕೆ ಹಾಗೂ ಹಳ್ಳಿಯ ಉದ್ಯಮಗಳಿಗೆ ಪ್ರಾಶಸ್ತ್ಯವನ್ನು ಕೊಟ್ಟರು. ಇಂದಿನ ಶತ ಮಾನದ ಜರ್ಮನ್ ವಿದ್ವಾಂಸನಾದ ಶ್ಯೂಮ್ಯಾಷರ್ ಎಂಬು ವನು ತನ್ನ 'ಚಿಕ್ಕದು ಸುಂದರ' ಎಂಬ ಗ್ರಂಥದಲ್ಲಿ ಮಂಡಿಸಿದ ಆರ್ಥಿಕ ವಿಚಾರಗಳು ಶರಣರ ವಿಚಾರಗಳನ್ನೇ ಪುಷ್ಟೀಕರಿಸುತ್ತಿವೆ. ಇದನ್ನು ನೋಡಿದಾಗ, ಶರಣರು ತಮ್ಮ ಕಾಲಕ್ಕಿಂತ ಎಂಟು ನೂರು ವರ್ಷ ಮುಂದಿನವರಾಗಿದ್ದರೆಂಬುದು ಹೊಳೆದಿರಲಿಕ್ಕಿಲ್ಲ.

## ೮. ಆರ್ಥಿಕ ಕಾರ್ಯಕ್ಷಮತೆ

ದೇಶದಲ್ಲಿ ದೊರಕುವ ಉತ್ಪಾದನಾ ಸಂಪನ್ಮೂಲಗಳ ಪರಿಣಾಮಕಾರಿ (ಸಮರ್ಥ) ಬಳಕೆಯನ್ನು ಆರ್ಥಿಕಕಾರ್ಯ ಕ್ಷಮತೆ ಎಂದು ಕರೆಯುತ್ತೇವೆ, ಒಂದು ನಿರ್ಧಿಷ್ಟ ಅವಧಿ ಯಲ್ಲಿ ದೊರಕುವ ಸಂಪನ್ಮೂಲಗಳನ್ನು ಬಳಸಿಕೊಂಡು ಸಂಪ ತ್ತಿನ ಗರಿಷ್ಟ ಉತ್ಪಾದನೆಯಾದರೆ ಆರ್ಥಿಕ ಕಾರ್ಯಕ್ಷಮತೆ ಮಹತ್ತರವಾಗಿದೆಯೆಂದು ತಿಳಿಯುತ್ತೇವೆ. ವಿವೇಚನಾಶೀಲರು

ಶರಣರ ವಚನಗಳನ್ನು ಸೂಕ್ಷ್ಮಗ್ರಾಹಿಗಳಾಗಿ ಅಭ್ಯಾಸ ಮಾಡಿದಾಗ, ಅವರಿಗೆ ಆರ್ಥಿಕ ಕಾರ್ಯಕ್ಷಮತೆ ಕುರಿತು ಶರಣರು ಚಿಂತನೆ ಮಾಡಿದುದು ಗೋಚರಿಸದಿರದು. ನೇರವಾಗಿ ಈ ವಿಷಯ ಕುರಿತು ಶರಣರು ತಮ್ಮ ವಚನಗಳಲ್ಲಿ ವಿವೇಚಿಸದಿದ್ದರೂ, ಅವರು ಕಾಯಕ ತತ್ವದ ಪ್ರತಿಪಾದನೆಯಲ್ಲಿ ಈ ಅಂಶವನ್ನು ನಾವು ಕಂಡೇ ಕಾಣುತ್ತೇವೆ.

ಶರಣರ ವಚನಗಳ ಆಳವಾದ ಅಭ್ಯಾಸದಿಂದ ನಿವೃತ್ತಿಯಾಗುವ ಕೆಳಗಿನ ವಿಚಾರಗಳನ್ನು ಪರಿಶೀಲಿಸಿದರೆ ಅವರ ಆರ್ಥಿಕ ಕಾರ್ಯಕ್ಷಮತೆಯ ಸ್ವರೂಪ ನಮಗೆ ಗೊತ್ತಾಗುತ್ತದೆ.

೧. ಕಾಯಕ ಸ್ವಾತಂತ್ರ್ಯ.
೨. ಕಾಯಕದಲ್ಲಿ ಸತ್ಯತೆ, ಶುದ್ಧತೆ ಹಾಗೂ ಪ್ರಾಮಾಣಿಕತೆ
೩. ಸಮಯ ಪ್ರಜ್ಞೆ
೪. ಸಂಪನ್ಮೂಲಗಳ ಯುಕ್ತಬಳಕೆ
೫. ಕಾಯಕಕ್ಕೆ ತಕ್ಕ ಪ್ರತಿಫಲ.

ಸಮಾಜದಲ್ಲಿ ಪ್ರತಿಯೊಬ್ಬನಿಗೂ ತನ್ನ ತನ್ನ ಕಾಯಕವನ್ನು ಆಯ್ದುಕೊಳ್ಳುವ ಅವಕಾಶವಿರಬೇಕು. ಅಂದರೆ, ಕಾಯಕ ಸ್ವಾತಂತ್ರ್ಯವಿರಬೇಕು. ಈ ಅವಕಾಶವಿದ್ದರೇನೆ ಪ್ರತಿಯೊಬ್ಬನಿಗೂ ತನ್ನ ದೈಹಿಕ-ಮಾನಸಿಕ-ಭಾವಿಕ ಒಲವುಗಳಿಗನುಗುಣವಾಗಿ ಕಾಯಕವನ್ನು ಕೈಕೊಳ್ಳಲು ಸಾಧ್ಯ. ಹೀಗೆ ಕಾಯಕವನ್ನು ಕೈಕೊಂಡಾಗ ಅದು ಸತ್ಯ ಕಾಯಕವಾಗಿ ಪರಿಣ

ಬಿಂಬಿಸುತ್ತದೆ. ಸತ್ಯಕಾಯಕವೆಂದರೆ ಸಹಜ ಕಾಯಕ; ಕೃತ
ವಲ್ಲದ ಕಾಯಕ. ಕಾಯಕ ಸಹಜವಿದ್ದಲ್ಲಿ, ಅದರಲ್ಲಿ ಆಸಕ್ತಿ
ಶ್ರದ್ಧೆ, ಆಸಕ್ತಿ ಹಾಗೂ ಶ್ರದ್ಧೆ ಇವುಗಳಿಂದ ಕೂಡಿದ ಕಾಯಕ
ದಿಂದ ಸಮೃದ್ಧಿ. ಅದಕ್ಕೇನೆ ಶರಣರು ನಮ್ಮ ಕಾಯಕಗಳು
ಸತ್ಯಕಾಯಕಗಳಾಗಿರಬೇಕೆಂದು ಹೇಳಿದ್ದಾರೆ. ಕಾಯಕವು
ಸತ್ಯವಾಗಿದ್ದರಷ್ಟೆ ಸಾಲದು, ಅದು ಶುದ್ಧವೂ ಆಗಿರಬೇಕು.
ಶುದ್ಧ ಕಾಯಕವನ್ನು ಕುರಿತು ಶರಣರು,

"ಅಸಿಯಾಗಲಿ ಮಸಿಯಾಗಲಿ ಕೃಷಿಯಾಗಲಿ
ವಾಣಿಜ್ಯಮುಂತಾದ ಕೃಷಿಯ ಮಾಡುವಲ್ಲಿ
ಪಶುಪತಿಗೆಂದೇ ಪ್ರಮಾಣಿಸಿ"

—ಮೋಳಿಗೆ ಮಾರಯ್ಯ.

"ನಾವು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು,
ನಾನು ಬೆವಹಾರವ ಮಾಡುವೆನಯ್ಯಾ
ಲಿಂಗಾರ್ಚನೆಗೆಂದು,
ನಾನು ಪರಸೇವೆಯ ಮಾಡುವೆನಯ್ಯಾ ಜಂಗಮ
ದಾಸೋಹಕ್ಕೆಂದು"

—ಬಸವಣ್ಣ (ಬವ; ವ. ೭೦೮)

'ಆವ ಸ್ವಕಾಯಕದಿಂದಾದಡೂ ಅಗಲಿ
ಭಾವಶುದ್ಧವಾಗಿ ಮಾಡು(ವುದು) ಜಂಗಮ ಪೂಜೆ'

—ಡಕ್ಕೆಯ ಬೊಮ್ಮಯ್ಯ (ಸಪುವ;೧;ವ. ೮೪೫)

ಎಂದು ನುಡಿದಿದ್ದಾರೆ. ಭಾವಶುದ್ಧಿಯಿಂದ, ಕಾಯಕವು
ದೇವಪೂಜೆಯೆಂದು ಭಾವಿಸಿ ಅದನ್ನು ಕೈಕೊಂಡರೆ ಅದುವೆ

ಶುದ್ಧಕಾಯಕ, ಶಿವಸಂಪಾದನೆಯೊಂದೇ ಬದುಕಿನ ಪರಮ ಗುರಿ. ಎಂದು ತಿಳಿದು ಕಾಯಕವನ್ನು ಕೈಕೊಂಡಾಗ ಅಲ್ಲಿ ಅನ್ಯಭಾವಕ್ಕೆ ಇಂಬಿಲ್ಲ. ಅನ್ಯಭಾವವಿಲ್ಲದೆ, ಸಕಲರ ಲೇಸಿಗಾಗಿ ಈ ಕಾಯಕವೆಂದು ವ್ಯಕ್ತಿಯು ಕಾಯಕಶೀಲವಾದಾಗ ಅವನ ಕಾಯಕ ಶುದ್ಧಕಾಯಕವಾಗುತ್ತದೆ. ಈ ಶಿವಭಾವದಿಂದ ಕಾಯಕವನ್ನು ಕೈಕೊಂಡಾಗ ಕಾಯಕದಲ್ಲಿನ ನಮ್ಮ ಶ್ರದ್ಧೆ ನಿಷ್ಟೆಯಾಗಿ ಪರಿಣಮಿಸುತ್ತದೆ. ಕಾಯಕನಿಷ್ಟೆಯಿಂದ ಕಾರ್ಯಕ್ಷಮತೆ. ಕಾಯಕದಲ್ಲಿ ನಿತ್ಯತೆ ಹಾಗೂ ಶುದ್ಧತೆ ಇವುಗಳು ಅಳವಟ್ಟಲ್ಲಿ ನಮ್ಮ ಕೊಡು–ಕೊಳೆಗಳು ಪ್ರಾಮಾಣಿಕವಾಗುತ್ತವೆ. ಕಾಯಕದಲ್ಲಿಯ ಶುದ್ಧಿ ಭಾವವು ವ್ಯಾವಹಾರಿಕ ಕೊಡು–ಕೊಳೆಯಲ್ಲಿ ಪ್ರಾಮಾಣಿಕತೆಯಾಗಿ ಪರಿವರ್ತನಗೊಳ್ಳುತ್ತದೆ. ಶುದ್ಧಿ ಹಾಗೂ ಪ್ರಾಮಾಣಿಕತೆಯ ಅವಶ್ಯಕತೆಯನ್ನು ಕುರಿತು ಮೆರೆಮಿಂಡಯ್ಯನು—

> "ಅಸಿಯಾಗಲಿ, ಕೃಷಿಯಾಗಲಿ, ವಾಚಕ ವಾಣಿಜ್ಯ
> ಮಸಿಯಾಗಲಿ
> ಮಾಡುವಲ್ಲಿ ಹುಸಿಯಿಲ್ಲದಿರಬೇಕು,
> ಅದು ಅಸಮಾಕ್ಷನ ಬರವು, ಪಶುಪತಿಯ ಇರವು"
>
> —(ಸಪುವ–೧; ವ. ೩೨೫)

ಎಂದು ಅನುಭವಪೂರ್ವಕವಾಗಿ ನುಡಿದಿದ್ದಾನೆ. ಪ್ರಾಮಾಣಿಕ ಕಾಯಕದಲ್ಲಿ ಪರಶಿವ. ಕೈಲಾಸ ಶಿವನ ನಿವಾಸ. ಅಂತೆಯೇ ಕಾಯಕವೇ ಕೈಲಾಸ. ಕಾಯಕದಲ್ಲಿ ಸತ್ಯತೆ, ಶುದ್ಧತೆ ಹಾಗೂ

ಪ್ರಾಮಾಣಿಕತೆ ಮುಪ್ಪುರಿಗೊಂಡಾಗ ಆರ್ಥಿಕ ಕಾರ್ಯಕ್ಷಮ
ಗರಿಷ್ಟವಾಗದಿನ್ನೇನು?

ಕಾಯಕದಲ್ಲಿ ಸಮಯ ಪ್ರಜ್ಞೆಯೂ ಅವಶ್ಯಕ ಕಾಯ
ಕ್ಷಮತೆಗೆ ಕಾಯಕದಲ್ಲಿ ಸಮಯ ಪ್ರಜ್ಞೆಯ ಅವಶ್ಯಕತೆಯನ
ಕುರಿತು,

"ಕಾಯಕದಲ್ಲಿ ನಿರತನಾದರೆ,
ಗುರುದರುಶನವಾದಡೂ ಮರೆಯಬೇಕು,
ಲಿಂಗಪೂಜೆಯಾದಡೂ ಮರೆಯಬೇಕು,
ಜಂಗಮ ಮುಂದಿದ್ದಡೂ ಹಂಗು ಹರಿಯಬೇಕು"

—ಆಯ್ದಕ್ಕಿ ಮಾರಯ್ಯ (ಸಪುವ-೧; ವ. ೧೨೭೫

"ಕಾಯಕದೊಳಗೆ ಮೂರರ ಕೂಟ"

—ನುಲಿಯ ಚಂದಯ್ಯ (ಸಪುವ-೧; ವ. ೧೨೫೮

"ಕಾಯಕ ನಿಂದಿತ್ತು ಹೋಗಯ್ಯಾ, ಎನ್ನಾಳ್ದನೆ
...................................................
ಬೇಗ ಹೋಗು ಮಾರಯ್ಯ"

—ಆಯ್ದಕ್ಕಿ ಲಕ್ಕಮ್ಮ (ಶಿಶವ; ಪು. ೩೨೮, ವ. ೭೦

ಎಂದು ನುಡಿದಿದ್ದಾರೆ ಶರಣರು. ಕಾಯಕಕ್ಕೆ ವ್ಯತ್ಯಯ
ಬರಕೂಡದು. ವೇಳೆಗೆ ಸರಿಯಾಗಿ ಕಾಯಕ ಮಾಡುವಲ್ಲಿ ಗುರ
ಲಿಂಗ ಜಂಗಮರಿಂದಲೂ ಅಡಚಣೆಗೊಳ್ಳಬಾರದೆಂಬುದ
ಶರಣರ ಅಭೀಪ್ಸೆ. ಏಕೆಂದರೆ ಕಾಯಕದಲ್ಲಿಯೂ ಗುರುಲಿಂ
ಜಂಗಮರುಂಟೆಂಬುದು ಅವರ ಅನುಭಾವ ದರ್ಶನ ಕಾಯ
ಶೀಲರಿಗೆ ಗುರುಲಿಂಗಜಂಗಮದ ಅವಶ್ಯಕತೆ ಇಲ್ಲವೆಂದಲ್ಲ. ಗುರ

ದರ್ಶನ, ಲಿಂಗಪೂಜೆ ಜಂಗಮ ಸೇವೆಯ ನೆವದಿಂದ ಕಾಯಕ ನಿಲ್ಲಬಾರದೆಂಬುದು ಅವರ ಅಪೇಕ್ಷೆ. ಒಂದೊಂದು ಕೆಲಸಕ್ಕೆ ಒಂದೊಂದು ಸಮಯವನ್ನು ಕಲ್ಪಿಸಿಕೊಂಡು. ದಿನವೂ ಆಯಾ ಕೆಲಸಗಳಿಗೆ ವ್ಯತ್ಯಯ ಬರದಂತೆ ಸಮಯ ಪ್ರಜ್ಞೆಯನ್ನು ಪಾಲಿಸಿದರೆ ಎಲ್ಲವೂ ಸರಳ; ಎಲ್ಲಿಯೂ ಸಮೃದ್ಧಿ ಹೊಲದಲ್ಲಾಗಲೀ, ಕಾರ್ಖಾನೆಯಲ್ಲಾಗಲೀ ಕೆಲಸದಲ್ಲಿ ತೊಡಗಿದ್ದಾಗ ಕುಂಟು ನೆವಗಳಿಂದ ಕೆಲಸಕ್ಕೆ ವ್ಯತ್ಯಯವನ್ನುಂಟು ಮಾಡಿ ಆರ್ಥಿಕ ಕಾರ್ಯಕ್ಷಮತೆಗೆ ಧಕ್ಕೆಯನ್ನುಂಟು ಮಾಡುವ ಇಂದಿನ ಯುಗದ ಜನರಿಗೆ ಶರಣರ ಸಮಯ ಪ್ರಜ್ಞೆಯ ವಿಚಾರವೊಂದು ದಾರಿದೀಪ.

ಸಂಪತ್ತಿನ ಉತ್ಪಾದನೆಗೆ ಸಂಪನ್ಮೂಲಗಳ ಬಳಕೆ ಆವಶ್ಯಕ ಸಂಪನ್ಮೂಲಗಳಿಲ್ಲದೆ ಸಂಪತ್ತಿನ ಉತ್ಪಾದನೆಯೆಂಬುದು ಕನಸಿನ ಗಂಟು. ಸಂಪನ್ಮೂಲಗಳೆಲ್ಲ ಶಿವನ ಪ್ರಸಾದವೆಂದು ಶರಣರು ಭಾವಿಸುತ್ತಾರೆ. ಅರ್ಥಶಾಸ್ತ್ರಜ್ಞರು ಅವನ್ನೆ ಪ್ರಕೃತಿದತ್ತವೆಂದು ಅಭಿಪ್ರಾಯಪಡುತ್ತಾರೆ. ಸಂಪನ್ಮೂಲಗಳ ಬಗ್ಗೆ ದೇವರ ದಾಸಿಮಯ್ಯನು,

"ಎತ್ತು ನಿಮ್ಮದಾನ, ಬಿತ್ತು ನಿಮ್ಮದಾನ,
ಸುತ್ತಿ ಹರಿವ ಸಾಗರವೆಲ್ಲಾ ನಿಮ್ಮದಾನ"
(ಸಪುವ—೨; ವ, ೯೫೭)

"ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ,
ಸುಳಿದು ಬೀಸುವ ವಾಯು ನಿಮ್ಮ ದಾನ"
(ಸಪುವ—೨, ವ. ೯೫೫)

ಎಂದು ನುಡಿದಿದ್ದಾನೆ. ಈ ಸಂಪನ್ಮೂಲಗಳ ಯುಕ್ತಬಳಕೆ ಯಿಂದ ಆರ್ಥಿಕ ಕಾರ್ಯಕ್ಷಮತೆ ಹೆಚ್ಚುತ್ತದೆ. ಸಂಪನ್ಮೂಲ ಗಳ ಯುಕ್ತಬಳಕೆಯನ್ನು ಕುರಿತು ಬಸವಣ್ಣನು,

"ಕೂಡಲ ಸಂಗಮದೇವರನೊಲಿಸ ಬಂದ
ಪ್ರಸಾದ ಕಾಯುವ ಕೆಡಿಸಲಾಗದು"

(ಬವ; ವ. ೭೭೪)

ಎಂದು ನುಡಿದಿದ್ದಾನೆ. ಶಿವನ ಪ್ರಸಾದವಾದ ಸಂಪನ್ಮೂಲ ಗಳನ್ನು ಮಾನವ ಆವಶ್ಯಕತೆಗಳನ್ನು ಅನುಲಕ್ಷಿಸಿ ಹಿತಮಿತವಾಗಿ ಯುಕ್ತರೀತಿಯಲ್ಲಿ ಬಳಸಿಕೊಂಡು ಸಂಪತ್ತನ್ನು ನಾವು ಉತ್ಪಾ ದಿಸಬೇಕು. ಸಂಪನ್ಮೂಲಗಳ ದುರುಪಯೋಗ ಹಾಗೂ ಪೋಲು ಆಗಬಾರದು. ಖನಿಜ, ಅರಣ್ಯ, ತೈಲ ಇತ್ಯಾದಿ ಸಂಪನ್ಮೂಲಗಳನ್ನು ಅಯುಕ್ತರೀತಿಯಲ್ಲಿ ಬಳಸಿಕೊಂಡು ಇಂದು ಜಗತ್ತು ಅನುಭವಿಸುತ್ತಿರುವ ಆರ್ಥಿಕ ಬಿಕ್ಕಟ್ಟು ಸಕಲ ರಿಗೂ ವೇದ್ಯ. ಇಂದಿನ ಆಧುನಿಕ ಬಿಕ್ಕಟ್ಟಿನ ಪರಿಹಾರಕ್ಕೆ ಶರಣರ ಈ ವಿಚಾರ ಒಂದು ಸೂಕ್ತ ಮಾರ್ಗವಾಗಿದೆ.

ಕೊನೆಯದಾಗಿ, ಆರ್ಥಿಕ ಕಾರ್ಯಕ್ಷಮತೆಯು 'ಕಾಯ ಕಕ್ಕೆ ತಕ್ಕಪ್ರತಿಫಲ ಅಂಶವನ್ನು ಅವಲಂಬಿಸಿದೆ. ಅವರವರ ಕಾಯಕಕ್ಕೆ ತಕ್ಕ ಪ್ರತಿಫಲ ಅವರವರಿಗೆ ಸಿಗಬೇಕು. ಏಕರೀತಿಯ ಕೆಲಸವನ್ನು ಇಬ್ಬರು ಮಾಡಿದಾಗ ಲಿಂಗಭೇದವಿಲ್ಲದೆ, ವರ್ಣ ಭೇದವಿಲ್ಲದೆ ಇಬ್ಬರಿಗೂ ಸಮಾನ ಪ್ರತಿಫಲ ಸಿಗಬೇಕು. ಕಾಯಕ ಮಾಡಿದವನು ತನ್ನ ದುಡಿಮೆಯ ಮೌಲ್ಯವನ್ನು ಮೀರಿ ಧನವನ್ನು ಆಶಿಸಬಾರದು. ದುಡಿಸಿಕೊಂಡವನು ಕೂಡ ಅವನ ದುಡಿಮೆಗೆ ಯೋಗ್ಯವಾದುದಕ್ಕಿಂತ ಕಡಿಮೆ ಪ್ರತಿಫಲ ಕೊಡ

ಬಾರದು. ಈ ವಿಷಯವನ್ನು ಕುರಿತು ನುಲಿಯ ಚಂದಯ್ಯನು,

"ನೇಮದ ಕೂಲಿಯಿಂದಿನ ನಿತ್ಯನೇಮದಲ್ಲಿ ಸಂದಿರಬೇಕು,
ನೇಮದ ಕೂಲಿಯ ಬಿಟ್ಟು
ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿದರೆ
ತಾ ಮಾಡುವ ಸೇವೆ ನಷ್ಟವಯ್ಯಾ"

ಎಂದು ನುಡಿದಿದ್ದಾನೆ. ಹೀಗೆ ಶರಣರ ಪ್ರಕಾರ ಆರ್ಥಿಕ ಕಾರ್ಯಕ್ಷಮತೆಯು ಕಾಯಕ ಸ್ವಾತಂತ್ರ್ಯ, ಕಾಯಕದಲ್ಲಿ ಸತ್ಯತೆ ಶುದ್ಧತೆ ಪ್ರಾಮಾಣಿಕತೆ, ಸಮಯ ಪ್ರಜ್ಞೆ, ಸಂಪನ್ಮೂಲ ಗಳ ಯುಕ್ತ ಬಳಕೆ ಹಾಗೂ ಕಾಯಕಕ್ಕೆ ತಕ್ಕ ಫಲ–ಇವುಗಳನ್ನ ವಲಂಬಿಸಿದೆ.

## ೯. ನ್ಯಾಯಬೆಲೆ

ಸಂಪತ್ತಿನ ಉತ್ಪಾದನೆಯಲ್ಲಿ ಬಳಸುವ ವಿವಿಧ ಘಟಕ ಗಳಿಗೆ ಹಾಗೂ ಉತ್ಪಾದಿತ ಸಿದ್ಧವಸ್ತುಗಳಿಗೆ ಮಾರುಕಟ್ಟೆಯಲ್ಲಿ ನ್ಯಾಯವಾದ ಬೆಲೆ ಸಿಗಬೇಕೆಂಬುದು ಇಂದಿನ ಅರ್ಥಶಾಸ್ತ್ರ ಜ್ಞರೆಲ್ಲರ ಅಭಿಪ್ರಾಯ. ಪ್ರತಿಯೊಬ್ಬ ಶ್ರಮಜೀವಿಯು ಉತ್ಪಾ ದನಾ ಪ್ರಕ್ರಿಯೆಯಲ್ಲಿ ಸಲ್ಲಿಸಿದ ತನ್ನ ಸೇವೆಗೆ ತಕ್ಕ ಪ್ರತಿ ಫಲ ಪಡೆಯಬೇಕು. ಹಾಗೇನೆ ಉತ್ಪಾದಕನು ತನ್ನ ವಸ್ತುವನ್ನು ನ್ಯಾಯಬೆಲೆಗೆ ಮಾರಬೇಕು, ಈ ವಿಚಾರದ ಸುಳುಹನ್ನು ಬಸವಣ್ಣನ ಕೆಳಗಿನ ನುಡಿಯಲ್ಲಿ ಕಾಣಬಹುದು :

"ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ
ಹರವ ಕುಳ್ಳಿರ್ದ ನಮ್ಮ ಮಹಾದೇವ ಸೆಟ್ಟಿ,
..................................

ಕಾಣಿಯು ಸೋಲ, ಅರ್ಥಗಾಣಿಯುಂಗೆಲ್ಲ,
ಜಾಣ ನೋಡವ್ವಾ, ನಮ್ಮ ಕೂಡಲಸಂಗಮದೇವ"
—ಬಸವಣ್ಣ (ಬವ ವ. ೧೧೫)

ಜಗತ್ತಿನ ಮಾರುಕಟ್ಟೆಯ ಒಡೆಯನಾದ ಮಹಾದೇವನು ಉಚ್ಚವಟ್ಟದ ಶೆಟ್ಟಿಯಂತೆ ಅರ್ಥಕಾಣಿಯನ್ನೂ ಹೆಚ್ಚಿಗೆ ಅಪೇಕ್ಷಿಸುವುದಿಲ್ಲ. ಅರ್ಥಕಾಣಿಯನ್ನು ಸುಮ್ಮನೇ ಬಿಡಲೂ ಒಪ್ಪುವುದಿಲ್ಲ. ಈ ಜಾಣ್ಮೆಯ ವ್ಯಾಪಾರ ಲೋಕಹಿತವನ್ನು ಸಾಧಿಸುತ್ತದೆ. ಬಸವಣ್ಣನ ಮೇಲಿನ ನುಡಿಯಲ್ಲಿ ಇಂದಿನ ಬೆಲೆಯ ಸೀಮಾಂತ ಸಿದ್ಧಾಂತದ ಸುಳುಹನ್ನು ಕಾಣುತ್ತೇವೆ. ಒಟ್ಟಿನಲ್ಲಿ ನಮ್ಮ ಆರ್ಥಿಕ ವ್ಯವಹಾರವು ನೀತಿಯ ನೆಲೆಗಟ್ಟಿನ ಮೇಲೆ ನಡೆಯಬೇಕೆಂಬುದು ಮೇಲಿನ ನುಡಿಯ ಫಲಶ್ರುತಿ. ಇದನ್ನೇ ಪ್ರತಿಪಾದಿಸುತ್ತ ಹತ್ತೊಂಬತ್ತನೆ ಶತಮಾನದ ಸುಪ್ರಸಿದ್ಧ ಆಂಗ್ಲ ಅರ್ಥಶಾಸ್ತ್ರಜ್ಞ ಮಾರ್ಷಲ್ Economics should be the handmaid of Ethics ಎಂದು ನುಡಿದಿದ್ದಾನೆ. ಭಾರತದ ಸಾಂಪತ್ತಿಕ ಶಾಸ್ತ್ರಜ್ಞರಾದ ಡಾ. ವಿ. ಕೆ. ಆರ್. ವಿ. ರಾವ್ ಅವರೂ ತಮ್ಮ "Volues and Economic Development" ಗ್ರಂಥದಲ್ಲಿ ಇದೇ ಅಭಿಪ್ರಾಯವನ್ನು ಮಂಡಿಸಿದ್ದಾರೆ.

ಉತ್ಪಾದಕರಲ್ಲೂ ಹಾಗೂ ಕಾರ್ಮಿಕರಲ್ಲೂ ನೈತಿಕ ವಿಚಾರ ಬಲವಾಗಿ. ಕೆಲಸಮಾಡಿದಾಗ ಶೋಷಣೆಯೆಂಬುದಿಲ್ಲ; ಶೋಷಣೆಯಿಲ್ಲದಲ್ಲಿ ಶಾಂತಿ.

## ೧೦. ಸಂಪತ್ತು — ಮಾನವ ಕಲ್ಯಾಣ ಹಾಗೂ ಶಿವಾರ್ಥ ಸಾಧನ

"ಆವನೇವುವಾದಡೇನು ಹೇವುವಿಲ್ಲದಗ್ಗೈಸಬಹುದೆ?"
(ಬವ. ವ. ೪೩೮)

ಎಂಬ ಬಸವಣ್ಣನ ಪ್ರಶ್ನೆಯಲ್ಲಿ ಇಹಜೀವನದ ಬಯಕೆಗಳನ್ನು ಪೂರೈಸಲು ದ್ರವ್ಯ ಸಂಪಾದನೆ ಅವಶ್ಯಕ ಎಂಬ ಭಾವನೆ ತೋರದಿಲ್ಲ. ಸಂಪತ್ತಿನ ಉತ್ಪಾದನೆ ಇಲ್ಲದೆ ಆರ್ಥಿಕಾಭ್ಯುದಯ ತನ್ಮೂಲಕ ಸಾಮಾಜಿಕ ವಿಕಾಸ ಸಾಧ್ಯವಿಲ್ಲ. ಸಂಪತ್ತಿಗಾಗಿ ಸಂಪತ್ತನ್ನು ನಾವು ಉತ್ಪಾದಿಸುತ್ತಿಲ್ಲ. ಅದಕ್ಕೆ ಉದ್ದೇಶವೊಂದಿದೆ: ಮಾನವ ಕಲ್ಯಾಣ. "ಮಾನವ ಕಲ್ಯಾಣ ನಮ್ಮ ಗುರಿ. ಸಂಪತ್ತು ಇದನ್ನು ಸಾಧಿಸುವ ಸಾಧನ" ಎಂದು ಹತ್ತೊಂಬತ್ತನೆಯ ಶತಮಾನದ ಸುಪ್ರಸಿದ್ಧ ಆಂಗ್ಲ ಅರ್ಥಶಾಸ್ತ್ರಜ್ಞ ಆಲ್‌ಫ್ರೆಡ್ ಮಾರ್ಷಲ್ ಹೇಳಿದ. ಇದೇ ವಿಷಯವನ್ನು ಶರಣರು ಸುಮಾರು ಎಂಟುನೂರು ವರುಷಗಳ ಹಿಂದೆಯೇ ಹೇಳಿದ್ದಾರೆ.

ಮಾನವಕಲ್ಯಾಣದೊಂದಿಗೆ ಶಿವಾರ್ಥದ ಸಾಧನೆಗೂ ನಮ್ಮ ಸಂಪತ್ತು ಸಾಧನವಾಗಬೇಕೆಂದರು ಶರಣರು. ಶಿವಾರ್ಥದ ಗುರಿಯನ್ನು ಸಾಧಿಸದಿದ್ದಲ್ಲಿ ನಮ್ಮ ಸಂಪತ್ತಿಗೆ ಬೆಲೆಯಿಲ್ಲ. ನಮ್ಮ ಧನ ಹಾಗೂ ವಸ್ತುಗಳು ಚೈತನ್ಯದಿಂದೊಡಗೂಡಿದ ಜೀವ ಜಂಗಮವೆಲ್ಲಕ್ಕೂ ವಿನಿಯೋಗವಾಗಿ ಸದುಪಯೋಗ

ವಾದಾಗ ಶಿವಾರ್ಥ ಸಾಧಿಸಿದಂತೆ. ಸಂಕುಚಿತ, ಸ್ವಾರ್ಥ ಮನೋಭಾವದಿಂದ ಕೂಡಿದ ಅರ್ಥಸಂಪಾದನೆ ಜೀವಿಯ ಪರಮಗುರಿಯನ್ನು ಮರೆಸಬಾರದೆಂದು ಬಸವಣ್ಣನು,

"ಕಾಂಚನವೆಂಬ ನಾಯ ನೆಚ್ಚಿ ನಿಮ್ಮ ನಾನು
ಮರೆದೆನಯ್ಯಾ"
ಕಾಂಚನಕ್ಕೆ ವೇಳೆಯಲ್ಲದೆ ಲಿಂಗಕ್ಕೆ ವೇಳೆಯಿಲ್ಲ"
(ಬವ. ವ. ೩೧೩)

"ಎಲವದಮರ ಹೂತು ಫಲವಾದ ತೆರನಂತೆ :
ಸಿರಿಯಾದಡೇನು, ಶಿವಭಕ್ತಿಯಿಲ್ಲದನ್ನಕ್ಕ ?"
(ಬವ. ವ. ೧೨೧)

ಎಂದು ನುಡಿದಿದ್ದಾನೆ. ನಮ್ಮ ಸಂಪತ್ತು ಐಹಿಕ ಹಾಗೂ ಆಧ್ಯಾತ್ಮಿಕ ಪ್ರಗತಿಗೆ ಸಾಧಕವಾಗಬೇಕೇ ವಿನಾ ಬಾಧಕವಾಗಬಾರದೆಂಬುದು ಶರಣರ ಬಯಕೆ.

## ೧೧. ತೆರಿಗೆ

ಆಧುನಿಕ ರಾಜ್ಯಗಳನ್ನು 'ಕಲ್ಯಾಣ ರಾಜ್ಯ' ಗಳೆಂದು ಕರೆಯುತ್ತೇವೆ. ಆಡಳಿತ, ರಕ್ಷಣೆ, ಅಭಿವೃದ್ಧಿ ಹಾಗೂ 'ಕಲ್ಯಾಣ' ಕಾರ್ಯಗಳೆಂದು ರಾಜ್ಯದ ಕಾರ್ಯಗಳನ್ನು ವಿಂಗಡಿಸುತ್ತೇವೆ. ಈ ಎಲ್ಲ ಕಾರ್ಯಗಳಿಗೆ ಧನವು ಮುಖ್ಯವಾದುದು. ಬೇರೆ ಬೇರೆ ಆದಾಯಮೂಲಗಳಿಂದ ರಾಜ್ಯವು ಹಣವನ್ನು ಸಂಗ್ರಹಿಸುತ್ತದೆ. ತೆರಿಗೆಯು ಆ ಮೂಲಗಳಲ್ಲೊಂದು. ಶರಣರು ಈ ವಿಚಾರವನ್ನು ಮರೆತಿಲ್ಲ.

"ಭಾಂಡವ ತುಂಬಿದ ಬಳಿಕ ಸುಂಕವ ತೆತ್ತಲ್ಲದೆ
ವಿರಹಿತ ಹೋಗಬಾರದು"

(ಬವ. ವ.೧೯೮)

ಎಂದು ಬಸವಣ್ಣ ನುಡಿದಿದ್ದಾನೆ. ಸುಂಕ (ತೆರಿಗೆ)ವು ಸರಕಾರಕ್ಕೆ ಕಡ್ಡಾಯವಾಗಿ ನಾವು ಸಂದಾಯ ಮಾಡಬೇಕಾದ ಹಣ. ರಾಜದ ಬೊಕ್ಕಸ ಬಲಿದಂತೆ ರಾಜ್ಯದಲ್ಲಿ ಆರ್ಥಿಕಾಭ್ಯುದಯದ ಹಾಗೂ ಸಾರ್ವಜನಿಕ ಹಿತ ದೃಷ್ಟಿಯ ಕಾರ್ಯಗಳು ಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತವೆ. ಹೀಗೆ ರಾಜ್ಯ ಹಿತ ದೃಷ್ಟಿ ಯಿಂದ ಬಸವಣ್ಣನು ಹಲವಾರು ಕರಗಳನ್ನು ವಿಧಿಸಿದ್ದನು. ಇಂದಿನ ಕೆಲವು ಕರಗಳು ಬಸವಣ್ಣನು ವಿಧಿಸಿದ್ದ ಕರಗಳಲ್ಲಿ ಕೆಲ ವನ್ನು ಹೋಲುತ್ತವೆ ಎಂದರೆ ಬಸವಣ್ಣನು ತನ್ನ ಕಾಲಕ್ಕಿಂತ ಎಂಟುನೂರು ವರ್ಷಗಳ ಮುಂದಿನವನಾಗಿದ್ದನೆಂಬುದು ವಿಧಿತ ವಾಗುತ್ತದೆ. ಬಸವಣ್ಣನು ವಿಧಿಸಿದ ಕರಗಳು ಕೆಳಗಿನಂತಿವೆ :

### ೧. ಬಂಕದೆರೆ

ಬಲಿಷ್ಟರಾದ ಉಂಡಾಡಿ ಭಿಕ್ಷುಕರಿಂದ ರಸ್ತೆ ನಿರ್ಮಾಣ. ವ್ಯವಸಾಯ ಇತ್ಯಾದಿ ಕೆಲಸ ತೆಗೆದುಕೊಳ್ಳುವುದು ಬಂಕದೆರೆಯ ಸ್ವರೂಪ. ಇದನ್ನು 'ದೈಹಿಕ ಕರ' ಎಂದು ಬೇಕಾದರೆ ಕರೆಯ ಬಹುದು ವ್ಯಕ್ತಿಯ ವೃತ್ತಿ, ಆದಾಯ. ಆಸ್ತಿ, ಸಂಪತ್ತು ಹಾಗೂ ಇನ್ನಿತರ ವಸ್ತುಗಳ ಮೇಲೆ ಇಂದು ನಾವು ಕರ ಹೇರುತ್ತಿ ದ್ದೇವೆ. ಬಸವಣ್ಣನು ವ್ಯಕ್ತಿಯ ದೇಹದ ಮೇಲೆ ಕರ ಹೇರಿ ದನು. ಇದರಿಂದ ವ್ಯಕ್ತಿಗಳು ಉಂಡಾಡಿಗಳಾಗಿ ತಿರುಗದೆ ರಾಜ್ಯದ ಸಂಪತ್ತನ್ನು ಹೆಚ್ಚಿಸುವಲ್ಲಿ ಭಾಗಿಗಳಾದರು. ಭಿಕ್ಷು

ಕನೂ ಬೆವರಿನ ಬೆಲೆ ಹಾಗೂ ದುಡಿಮೆಯ ಸುಖವನ್ನನುಭವಿಸು ವಂತೆ ಮಾಡಿದನು ಬಸವಣ್ಣ.

**೨. ಸಿದ್ಧಾಯ:**

ಆಶ್ರಿತ ಸಂಸ್ಥಾನಿಕರಿಂದ ಬರುವ ಕಪ್ಪ ಕಾಣಿಕೆ.

**೩. ಬಿಟ್ಟಕೊಟ್ಟಣ:**

ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಗಳ ವಿಶೇಷ ಸಂದರ್ಭಗಳಲ್ಲಿ ಪ್ರತಿ ಮನೆಯಿಂದಲೂ ಪ್ರತಿನಿಧಿಗಳು ಬಂದು ರಾಜ್ಯದ ಕೆಲಸವನ್ನು ಪ್ರತಿಫಲಾಪೇಕ್ಷೆಯಿಲ್ಲದೆ ಮಾಡುವುದು. ಈಗಲೂ ಕೆಲವೆಡೆ ಇದನ್ನು ಕಾಣುತ್ತೇವೆ.

**೪. ಅಂಕೆಯ ಸೊಲ್ಲಿಗೆ:**

ತಮ್ಮ ಯೋಗ್ಯತಾನುಸಾರ ಅನುಕೂಲಸ್ಥರು ರಾಜನಿಗೆ ವಿಶೇಷ ಸಂದರ್ಭಗಳಲ್ಲಿ ಮರ್ಯಾದೆ ಸಲ್ಲಿಸುವುದು.

**೫. ಕವಣೆ:**

ವಿದ್ಯಾಭ್ಯಾಸದ ಮೇಲಿನ ಕರ. ಈಗಿನ ಶಿಕ್ಷಣ ಶುಲ್ಕ ಇದನ್ನು ಹೋಲುತ್ತದೆ.

**೬. ಕಡ್ಡಾಯದಂಕೆ:**

ಗೊಡ್ಡ ಪಶುಗಳ ಮೇವಿನ ಸುಂಕ (ದೊಡ್ಡಿ ಪಶುಗಳ?)

**೭. ಅಪುತ್ರಿಕೆ:**

ವಾರಸುದಾರರಿಲ್ಲದ ಸೊತ್ತುಗಳು ರಾಜ್ಯಕೋಶಕ್ಕೆ ಸೇರಬೇಕು. ಇದನ್ನು ಇಂದು ನಾವು Escheats ಎಂದು ಕರೆಯುತ್ತೇವೆ.

**೮. ದಂತ :**

ಒಣಬೇಸಾಯದ ಭೂಮಿಗಳಿಗೆ ನೀರಾವರಿಯ ಸೌಲಭ್ಯ ಒದಗಿಸುವುದರ ಮೇಲಣ ಸುಂಕ. ಇಂದಿನ ಸರಕಾರಗಳು ಜನರಿಂದ(ಜಲಾಶಯದಿಂದ ಸೌಲಭ್ಯ ಪಡೆಯುವ) ವಸೂಲು ಮಾಡುವ Special Assessment ಮೇಲಣ ಸುಂಕವನ್ನು ಹೋಲುತ್ತದೆ.

**೯. ಉಂಡಿಗೆ ;**

ಸುಖಸಾಧನಗಳ ಮೇಲಣ ಸುಂಕ.

**೧೦. ಸುಂಕ :**

ಆಮದು ಹಾಗೂ ರಫ್ತು ಇವುಗಳ ಮೇಲಿನ ಕರ. ಈಗಿನ Importduty ಹಾಗೂ Export duty ಗಳು ಇದನ್ನು ಹೋಲುತ್ತವೆ.

**೧೧. ತಳವರಿಗೆ :**

ಭೂಮಿಯ ರಕ್ಷಣದ ಮೇಲಣ ಸುಂಕ.

**೧೨. ಗುತ್ತಿಗೆ :**

ಭೂಮಿಯನ್ನು ಸಾಗುವಳಿಗೆ ಗುತ್ತಿಗೆ ತೆಗೆದುಕೊಳ್ಳುವುದರ ಮೇಲಣ ಕರ.

ಮೇಲಿನ ವಿಷಯ ವಿವೇಚನೆಯಿಂದ, ರಾಜ್ಯಕೋಶವನ್ನು ಹೇಗೆ ಬೆಳೆಸಬೇಕು ಮತ್ತು ಅದನ್ನು ಪ್ರಜಾಭ್ಯುದಯದ ಕಾರ್ಯಗಳಿಗೆ ಹೇಗೆ ಉಪಯೋಗಿಸಿಕೊಳ್ಳಬೇಕೆಂಬುದನ್ನು ಬಿಜ್ಜಳನ

ಅರ್ಥಮಂತ್ರಿಯಾಗಿದ್ದ ಬಸವಣ್ಣನು ಓರ್ವ ಸಮರ್ಥ ಅರ್ಥ ಶಾಸ್ತ್ರಜ್ಞನಂತೆ ಯೋಚಿಸುತ್ತಿದ್ದನು ಎಂಬುದರ ಸ್ಪಷ್ಟ ಚಿತ್ರ ನಮ್ಮೆದುರು ನಿಲ್ಲುತ್ತದೆ.

## ೧೨. ಆರ್ಥಿಕ ಸಮತೆ

ಆರ್ಥಿಕ ಸಮತೆ ಎಂಬುದು ಸಮಾಜವಾದದ ಲಕ್ಷಣಗಳಲ್ಲೊಂದು. ಆರ್ಥಿಕ ಸಮತೆ ಎಂದರೆ ದೇಶದಲ್ಲಿ ಪ್ರತಿಯೊಬ್ಬರ ಆದಾಯವು ಸಮವಿದ್ದು ಒಂದೇ ವಿಧವಾದ ಜೀವನಮಟ್ಟ ಹೊಂದುವುದು ಎಂದಲ್ಲ. ನೂರಕ್ಕೆ ನೂರರಷ್ಟು ಆರ್ಥಿಕ ಸಮತೆ ಎಂಬುದು ಮಿಥ್ಯ ಕಲ್ಪನೆ. ದೇಶದಲ್ಲಿ ಅವರವರ ಯೋಗ್ಯತಾನುಸಾರ ದುಡಿಯಲು ಜನರಿಗೆ ಸಮಾನ ಅವಕಾಶಗಳಿದ್ದು, ಅವರ ಕನಿಷ್ಟ ಹಾಗೂ ಗರಿಷ್ಟ ಆದಾಯಗಳಲ್ಲಿ ಗಣನೀಯ ಅಂತರವಿರದೆ, ಪ್ರತಿಯೊಬ್ಬ ವ್ಯಕ್ತಿಯು ತನ್ನ ಜೀವನದ ಅಗತ್ಯಗಳನ್ನು ಪೂರೈಸುವ ಶಕ್ತಿಯನ್ನು ಹೊಂದಿದ್ದರೆ ಆಗ ದೇಶದಲ್ಲಿ ಆರ್ಥಿಕ ಸಮತೆ ಎಂಬ ಪದಕ್ಕೆ ಬೆಲೆ ಬರುತ್ತದೆ. ನೇರವಾಗಿ ಈ ವಿಷಯ ಕುರಿತು ಶರಣರು ತಮ್ಮ ವಚನಗಳಲ್ಲಿ ವಿವೇಚಿಸದಿದ್ದರೂ ಅವರ ವಚನಗಳನ್ನು ಕೂಲಂಕಷವಾಗಿ ಅಭ್ಯಾಸ ಮಾಡಿದವರಿಗೆ, ಈ ವಿಷಯ ಕುರಿತು ಪರೋಕ್ಷವಾಗಿ ಶರಣರು ಪ್ರತಿಪಾದಿಸಿರುವುದು ಗೋಚರಿಸದಿರದು. ಆರ್ಥಿಕ ಸಮತೆಯನ್ನು ಸಾಧಿಸಲೋಸುಗ ಶರಣರು ವ್ಯಕ್ತಪಡಿಸಿದ ವಿಚಾರಗಳನ್ನು ಕೆಳಗಿನಂತೆ ಕ್ರೋಢೀಕರಿಸಬಹುದು :

೧. ಪ್ರತಿಯೊಬ್ಬನಿಗೂ ಕಾಯಕದ ಅವಕಾಶ.

೨. ಅರ್ಥ ಸಂಪಾದನೆಯಲ್ಲಿ ಪ್ರಾಮಾಣಿಕತೆ.
೩. ಸಂಪತ್ತಿನ ನ್ಯಾಯ ಸಮ್ಮತ ವಿತರಣೆ.
೪. ಸಂಪತ್ತಿನ ವೈಯಕ್ತಿಕ ಸಂಗ್ರಹಣೆ ಸಲ್ಲದು.
೫. ದಾನ.

ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಕಾಯಕದಿಂದಲೇ ಬದುಕಬೇಕೆಂಬುದು ಶರಣರವಾದ. ದುಡಿಯುವವನಿಗೆ ಬದುಕಲು ಹಕ್ಕಿಲ್ಲ. ಕಾಯಕ ದೊರೆಯದಿದ್ದಲ್ಲಿ ಅದನ್ನು ಕಲ್ಪಿಸಿ ಕೊಳ್ಳಬೇಕು ವ್ಯಕ್ತಿ. ಹೀಗೆ ಒಂದಿಲ್ಲೊಂದು ಕಾಯಕವನ್ನವಲಂಬಿಸಿ ಪ್ರತಿಯೊಬ್ಬನು ಜೀವನ ಸಾಗಿಸಬೇಕು. ಇದರಿಂದ ಸ್ವಾವಲಂಬನೆ ಬೆಳೆಯುವುದಲ್ಲದೆ ಪರಾವಲಂಬನೆ ದೂರವಾಗುತ್ತದೆ. ಸ್ವಸಾಮರ್ಥ್ಯದಿಂದಲೇ ಬದುಕುತ್ತಿದ್ದೇನೆಂಬ ಸ್ವಾಭಿಮಾನವು ಬೆಳೆಯುತ್ತದೆ ಕಾಯಕಶೀಲನಲ್ಲಿ.

ವ್ಯಕ್ತಿಯ ಕಾಯಕವು ಸತ್ಯವು ಶುದ್ಧವೂ ಆಗಿರಬೇಕು. ಹುಸಿ, ಮೋಸ, ಕಳವು, ವಂಚನೆ ಮುಂತಾದ ಯಾವ ವಾಮ ಮಾರ್ಗಕ್ಕೂ ಸ್ಥಾನವಿಲ್ಲ. ಅರ್ಥಸಂಪಾದನೆಯಲ್ಲಿ, ನಮ್ಮ ಗಳಿಕೆ ಪ್ರಾಮಾಣಿಕವಾಗಿರಬೇಕು. ಇದನ್ನು ಕುರಿತು ಶರಣರು,

"ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು
ಲಿಂಗಕ್ಕರ್ಪಿತವಲ್ಲದೆ ದುರಾಶೆಯಿಂದ ಬಂದುದು
ಅನರ್ಪಿತ"

–ನುಲಿಯ ಚಂದಯ್ಯ (ಶೂಸ; ಪು. ೨೫೪ ವ. ೧೫)

"ಪಶುಪತಿಯ ಭಕ್ತನಾಗಿದ್ದು ಹುಸಿದು, ಸರ್ವರ ವಂಚಿಸಿ

ಪಿಸುಣತನದಿಂದ ಕಾಡಿ ಬೇಡಿ ತಂದವನ ಮನೆಯನ್ನು
ಕಿಸುಕುಳಕೆ ಸರಿ"
—ಕೋಲಶಾಂತಯ್ಯ (ಸಪುವ-೧.ವ.೭೨)

"ತನುಮನ ಬಳಲದೆ ಉದ್ದಂಡ ವೃತ್ತಿಯಲ್ಲಿ ಧನವಗಳಿಸಿ,
ಗುರುಲಿಂಗಜಂಗಮಕ್ಕೆ ವೆಚ್ಚಿಸಿ ದಾಸೋಹವ ಮಾಡಿ,
ಭಕ್ತನಾದೆನೆಂಬವನ ತೋರದಿರಯ್ಯಾ,
ಅದೇಕೆಂದಡೆ :
ಆವ ಪರಧನಚೋರಕ, ಆವ ಪಾಪಿ, ಕೋಪಿ,
ಪರಿಭ್ರಷ್ಟ"
—ಚೆನ್ನಬಸವಣ್ಣ(ಚವ. ವ. ೬೭)

"ಪರಧನದಾಮಿಷವ ತೊರೆಯಿಂಬೋ"
—ಬಸವಣ್ಣ (ಬವ. ವ. ೬೫೨)

"ಅನ್ಯರ ದ್ರವ್ಯವ ಅಪಹಸಿರಿಕೊಂಡಲ್ಲಿ ಅದು ತನಗೆ
ಅನ್ಯದೈವ
—ಎಲೇಶ್ವರದ ಕೇತಯ್ಯ (ಸಪುವ–1 ವ. ೧೬೩೮)

"ಹಣ ಬಂಗಾರ ವಸ್ತ್ರ ಕಪ್ಪಡ
ಬಟ್ಟೆಯಲ್ಲಿ ನೆಟ್ಟನೆ ಬಿದ್ದಿರಲು,
ಕಂಡು ಕಾತರಿಸಿ, ಕೈಮುಟ್ಟಿ ಎತ್ತರದ ಭಾಷೆ,
ಕೊಟ್ಟಡೆ ಮುಟ್ಟದ ಭಾಷೆ
—ಆದಯ್ಯ (ಸಪುವ-೨. ವ. ೨೫೦)

"ಲಂಚ ವಂಚನಕ್ಕೆ ಕೈಯಾನದ ಭಾಷೆ,
ಬಟ್ಟೆಯಲ್ಲ ಹೊನ್ನು ವಸ್ತ್ರ ಬಿದ್ದದ್ದಡೆ
ಕೈ ಮುಟ್ಟಿ ಎತ್ತಿದೆನಾದಡೆ, ಅಯ್ಯಾ, ನಿಮ್ಮಾಣೆ"
—ಸತ್ಯಕ್ಕ (ಶಿಶವ. ಪು.೩೫೬. ವ. ೧೩೭)

ಎಂದು ನುಡಿದಿದ್ದಾರೆ. ಹೀಗೆ ಋಜುಮಾರ್ಗದಿಂದ ಎಲ್ಲರೂ ಅರ್ಥ ಸಂಪಾದನೆ ಮಾಡಲು ಪ್ರಾರಂಭಿಸಿದರೆ ಆರ್ಥಿಕ ಸಮತೆಯು ಕಡೆಗೆ ಎಷ್ಟೋ ಸಮೀಪ ಸಾಗಿದಂತಾಗುತ್ತದೆ. ಮೇಲಾಗಿ ಪಾಪ ಮಾರ್ಗದ ಸಂಪಾದನೆಯಿಂದ ಹಿತವಿಲ್ಲವೆನ್ನುತ್ತಾರೆ ಶರಣರು. ಬಸವಣ್ಣನು "ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದು" ಎನ್ನುತ್ತಾನೆ.

ನಮ್ಮ ಸತ್‌ಕಾಯಕಗಳಿಂದ ಬಂದ ಅರ್ಥದಲ್ಲಿ ಜಂಗಮ ದಾಸೋಹವನ್ನು ಕೈಕೊಂಡು ತತ್ ಪ್ರಸಾದವನ್ನು ಸ್ವೀಕರಿಸ ಬೇಕೆಂಬುದು ಶರಣರ ವಿಚಾರ. ಗುರುಲಿಂಗ ಜಂಗಮರಿಗೆ ಅರ್ಪಿಸುವುದು ಎಂದರೆ ಧರ್ಮದ ಉಳಿವಿಗೆ ಹಾಗೂ ಸಮಾಜ ವಿಕಾಸಕ್ಕೆ ಅರ್ಪಿಸುವುದು ಎಂದರ್ಥ. 'ದಾಸೋಹ'ವೆಂಬುದು 'ಕಾಯಕ' ಪರಿಕಲ್ಪನೆಯು ಬೆನ್ನಿಗಂಟಿಕೊಂಡಿರುವ ಇನ್ನೊಂದು ಪರಿಕಲ್ಪನೆ. ದಾಸೋಹವನ್ನು ಕುರಿತು ಶರಣರು,

"ಸತ್ಯಶುದ್ಧ ಕಾಯಕವ ಮಾಡಿ ತಂದು,
ವಂಚನೆಯಿಲ್ಲದೆ ಪ್ರಪಂಚಳಿದು,
ನಿಚ್ಚ ಜಂಗಮಕ್ಕೆ ದಾಸೋಹವ ಮಾಡು......"
—ಮಾದಾರ ಧೂಳಯ್ಯ(ಸಪುವ-೧; ವ. ೧೬೬೦)

"ರಾಜ ಚೋರರ ಭಯಕ್ಕಂಜಿ ಜಂಗಮದಾಸೋಹವ ಮಾಡಲಿಲ್ಲ"
ನುಲಿಯ ಚಂದಯ್ಯ (ಸಪ್ರವ-೧. ವ. ೧೨೨೩)

"ಧನವ ಕೊಟ್ಟು ಜಂಗಮವನೊಲಿಸಬೇಕು"
—ಬಸವಣ್ಣ (ಬವ. ವ. ೨೦೬)

"ಜಂಗಮಕ್ಕಲ್ಲದೆ ಮಾಡೆನೀ ಧನವನು"
—ಬಸವಣ್ಣ (ಬವ. ವ. ೭೨೭)

"ನಮ್ಮ ಕೂಡಲಸಂಗನ ಶರಣರಿಗೆ ಮಾಡಿಮಾಡಿ
ಧನ ಸವೆದು ಬಡವನಾದಡೆ
ಆ ಭಕ್ತನು ಆ ಲಿಂಗಕ್ಕೆ ಪೂಜೆಯುಹನು"
—ಬಸವಣ್ಣ (ಬವ. ವ. ೧೫೦)

"ತಂದೆಯು ಮಗ ಕರೆದು, ಮಗನ ತಂದೆ ಕರೆದು,
ಭಾವನ ಮೈದುನ ಕರೆದು, ಮೈದುನನ ಭಾವ ಕರೆದು,
ತಮ್ಮ ಬಂಧುಗಳ ಜಂಗಮವೆಂದು ಕೂಡಿಕೊಂಡು ಉಂಬ
ಜಗ ಭಂಡರ ನೇಮ ಸುಸಂಗವಲ್ಲ, ಏಲೇಶ್ವರಲಿಂಗಕ್ಕೆ"
—ಏಲೇಶ್ವರದ ಕೇತಯ್ಯ (ಸಪುವ–೧. ವ. ೧೫೮೨)

ಎಂದು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

ಶಿವನ ಪ್ರಸಾದದಿಂದ ಲಭಿಸಿದ ತನುಮನಧನ ಇವುಗಳನ್ನು ಶಿವನ ಮೂರು ಮೂರ್ತಸ್ವರೂಪಗಳಾದ ಗುರುಲಿಂಗ ಜಂಗಮರಿಗೆ ಅರ್ಪಿಸಿ ಶುದ್ಧನಾಗಿ, ತತ್ ಪ್ರಸಾದವನ್ನು ಸ್ವೀಕರಿಸಿ ಪ್ರಸನ್ನತೆಯನ್ನು ಹೊಂದುವುದೇ ದಾಸೋಹದ ಮರ್ಮ. ಶರಣರ ಮೇಲಿನ ನುಡಿಗಳಲ್ಲಿ ಬಂದಿರುವ 'ಜಂಗಮ' ಪದಕ್ಕೆ ಎರಡು ಅರ್ಥಗಳುಂಟು : ಒಂದು, ಚೈತನ್ಯದಿಂದ ತುಂಬಿದ ಸಚರಾಚರ ವಸ್ತುವೆಲ್ಲವೂ ಜಂಗಮವೆ. ಎರಡನೆಯದು, 'ಧಾರ್ಮಿಕ–ಸಾಮಾಜಿಕ' ಸಂಸ್ಥೆ. 'ಜಂಗಮಕ್ಕೆ ಧನವನು ಸವೆಸುವುದು' ಎಂದಾಗ ನಮ್ಮಲ್ಲಿರುವ ಧನ ಮತ್ತು ಪದಾರ್ಥ (ಅಗತ್ಯಗಳನ್ನು ಪೂರೈಸಿಯಾದ ಮೇಲೆ) 'ನಿರರ್ಥಕ ನಿಧಿ'ಯಾಗಿ ಉಳಿಯದೇ ಸರ್ವರ ಹಿತದೃಷ್ಟಿಯಿಂದ ಸಮಾಜದಲ್ಲಿ ವಿನಿಯೋ

ಗವಾಗುವುದು ಎಂದರ್ಥ. ಒಂದೊಂದು ಕುಟುಂಬವೂ ಒಂದೊಂದು ಹೊಟ್ಟೆಗೆ ಅನ್ನವನ್ನು ಕೊಟ್ಟಿದ್ದಾದರೆ 'ಹಸಿದ ಹೊಟ್ಟೆ' ಎನ್ನುವುದೇ ಇರುವುದಿಲ್ಲ. ಕುಟುಂಬದ ಸದಸ್ಯರನ್ನು ಹೊರತು ಪಡಿಸಿ ಇನ್ನೊಂದು ಜೀವನಕ್ಕೆ ದಾಸೋಹ ಮಾಡ ಬೇಕೆನ್ನುತ್ತಾರೆ ಶರಣರು. ಮೇಲಾಗಿ 'ಜಂಗಮ' ಸಂಸ್ಥೆಗೆ ಧನವನ್ನು ಸಲ್ಲಿಸಿದರೆ ಅದರ ಸಾಮೂಹಿಕ ಅನುಭೋಗಕ್ಕೆ ಅವಕಾಶವನ್ನು ಕಲ್ಪಿಸಿದಂತಾಗುತ್ತದೆ. ಈ ಸಂಸ್ಥೆಯ ಮಾಧ್ಯ ಮದಿಂದ ಸಮಾಜದಲ್ಲಿ ಸಂಪತ್ತಿನ ನ್ಯಾಯಸಮ್ಮತ ವಿತರಣೆ ಯಾಗಿ, ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳು ಸುಲಲಿತ ವಾಗಿ ಸಾಗುತ್ತವೆ. ಜಂಗಮ ದಾಸೋಹದಲ್ಲಿ 'ಎಲ್ಲರೆಲ್ಲರಿಗಾಗಿ' ಎನ್ನುವ ವಿಶಾಲ ಮನೋಭಾವವಡಗಿದೆ.

ಸಂಪತ್ತಿನ ನ್ಯಾಯ ಸಮ್ಮತ ವಿತರಣೆಗೆ ಪೂರಕವೆಂಬಂತೆ, ಶರಣರು ಸಂಪತ್ತಿನ ವೈಯಕ್ತಿಕ ಸಂಗ್ರಹಣೆ ಸಲ್ಲದೆಂದು ಹೇಳಿ ದ್ದಾರೆ. ಸಂಪತ್ತಿನ ವೈಯಕ್ತಿಕ ಸಂಗ್ರಹಣೆ ಕುರಿತು ಶರಣರು,

"ಇಂದಿಂಗೆಬುದು ಲಿಂಗದೊಳಿಲು ಶಿವಭಕ್ತಂಗೆ,
ನಾಲಗೆಂಬುದು ಬದ್ಧ ಭವಿತನ"

—ಸಿದ್ಧರಾಮೇಶ್ವರ (ಸಿವ; ವ. ೩೧೫)

"ಅಂದಂದಿಗೆ ಬಂದ ಧನವನಂದೆ ವೆಚ್ಚವ ಮಾಡಿ"

—ಅಲ್ಲಮ ಪ್ರಭು (ಅವಚ. ವ. ೭೯)

"ಇಂದಿಗೆ ನಾಳಿಗೆ ಎಂಬ ಸಂದೇಹಮಂ ಬಿಟ್ಟು
ಮುಂದಣ ಕಾಯಕ ಅಂದಂದಿಗೆ ಉಂಟು
ಎಂಬುದನರಿತು,
ಬಂಮಂದ ಕೂಡಿಕೊಂಡು, ಲಿಂಗಾರ್ಚನೆಯ ಮಾಡಿ
ಸದಾನಂದದಲ್ಲಿಪ್ಪ"

—ಅಕ್ಕಮ್ಮ (ಶಿಶವ. ಪು. ೪೭೮ ವ. ೪೧)

"ಮನೆ ನೋಡಾ ಬಡವರು, ಮನ ನೋಡಾ ಘನ,
ಪಸರಕ್ಕನುವಿಲ್ಲ; ಬಂದ ತತ್ ಕಾಲಕ್ಕುಂಟು"
—ಬಸವಣ್ಣ (ಬವ. ವ. ೩೨೫)

ಎಂದು ನುಡಿದಿದ್ದಾರೆ. 'ಸಂಪತ್ತಿನ ವೈಯಕ್ತಿಕ ಸಂಗ್ರಹಣೆ ಹಾನಿಕಾರಕ; ಸರ್ವರ ಕ್ಷೇಮಕ್ಕೆ ಧನವೆಂಬ ದೃಷ್ಟಿಯಿಂದ ಸಾಮೂಹಿಕ ಸಂಗ್ರಹಣೆ ಶುಭದಾಯಕ' ಎಂಬುದು ಶರಣರ ನಿಲವು. ಅನಗತ್ಯವಾಗಿ ನಾವು ಸಂಪತ್ತನ್ನು ಸಂಗ್ರಹಿಸಬಾರದು. ವೈಯಕ್ತಿಕ ಸಂಗ್ರಹಣೆ ಎಂದರೆ ಇನ್ನೊಬ್ಬರಿಗೆ ದೊರೆಯಬಹುದಾದುದನ್ನು ತಪ್ಪಿಸಿದಂತೆ. ಸಂಗ್ರಹಣೆಯ ಇಚ್ಛೆ ಪ್ರಬಲವಾದಲ್ಲಿ ವಾಮಮಾರ್ಗದ ಸಂಪಾದನೆಗೆ ಮನವೆಳಸುತ್ತದೆ. ಇದನ್ನು ಹಿಂಬಾಲಿಸಿಕೊಂಡು ಅಪ್ರಾಮಾಣಿಕತೆ, ಶೋಷಣೆ ನಮ್ಮ ದುಡಿಮೆಯಲ್ಲಿ ಕಾಣಿಸಿಕೊಳ್ಳುತ್ತವೆ. ಇದರಿಂದ ಆರ್ಥಿಕ ವಿಷಮತೆ ಹಾಗೂ ಅತೃಪ್ತಿ, ಅಶಾಂತಿಗಳು ಸಮಾಜದಲ್ಲಿ ತಲೆದೋರುತ್ತವೆ. ಮೇಲಾಗಿ, ಕಾಯಕವು ತನ್ನ ಸತ್ವವನ್ನು ಕಳೆದುಕೊಳ್ಳುತ್ತದೆ. ಇದರಿಂದ ನಾವು ನಮ್ಮ ಜೀವನದ ಪರಮ ಗುರಿಯನ್ನು ಮರೆಯುತ್ತೇವೆ. ದ್ರವ್ಯ ಸಂಗ್ರಹಣೆಯ ಬೆನ್ನು ಹತ್ತಿದ ಜನರನ್ನು ನೋಡಿ ಬಸವಣ್ಣನು,

"ಕಾಂಚನವೆಂಬ ನಾಯ ನಚ್ಚಿ ನಿಮ್ಮ ನಾನು
ಮರೆದೆನಯ್ಯಾ,
ಕಾಂಚನಕ್ಕೆ ವೇಳೆಯಿಲ್ಲದೆ ಲಿಂಗಕ್ಕೆ ವೇಳೆಯಿಲ್ಲ,
ಹಡಿಕೆಗೆ ಮಚ್ಚಿದ ಸೊಣಗ ಅಮೃತದ ರುಚಿಯಬಲ್ಲುದೆ?"
(ಬವ. ವ. ೩೧೩)

ಎಂದು ವಿಡಂಬನಾತ್ಮಕವಾಗಿ ಮೂದಲಿಸಿದ್ದಾನೆ. ನಮ್ಮ ಅಗತ್ಯವನ್ನು ಮೀರಿದ ಧನವನ್ನು ಸಮಾಜದ ಅಭ್ಯುದಯಕ್ಕಾಗಿ ಧರ್ಮದ ಉಳಿವಿಗೆ. ಬೆಳವಿಗೆಗೆ ಕೊಡಬೇಕು ಸಂಪತ್ತಿನ ಸಾಮೂಹಿಕ ಸಂಗ್ರಹಣೆಯಿಂದ ಸಮಾಜದ ಸರ್ವಾಂಗೀಣ ವಿಕಾಸ ಸಾಧ್ಯ. ಇಂದು ಸಮಾಜವಾದಿಗಳು, ಸಮತಾವಾದಿಗಳು ಏನನ್ನು ಹೇಳಲು ಬಯಸುತ್ತಿದ್ದಾರೆಯೋ ಅದನ್ನು ಶರಣರು ಬಹಳ ಹಿಂದೆಯೇ ಪ್ರತಿಪಾದಿಸಿದರು ಹಾಗೂ ಪರಿಪಾಲಿಸಿದರು.

ಆರ್ಥಿಕ ವಿಷಮತೆಯನ್ನು ಹೋಗಲಾಡಿಸಿ, ಆರ್ಥಿಕ ಸಮತೆಯನ್ನು ಸಮಾಜದಲ್ಲಿ ಸ್ಥಾಪಿಸಲು ಮಾಡುವ ಪ್ರಯತ್ನಗಳಲ್ಲಿ 'ದಾನ'ವೂ ಒಂದು. ಉಳ್ಳವರು ಇಲ್ಲದವರಿಗೆ ಕೊಡಬೇಕು. ಇದನ್ನು ಕುರಿತು ಬಸವಣ್ಣನು,

"ಬೇಡುವವರ ನೋಡಿ ನೋಡಿ ಈಯಲಿಲ್ಲದ
ಜೀವನವದೇಕೆ?"
(ಬವ. ವ. ೪೩೮)

"ಬೇಡಿದವರಿಗಿಲ್ಲೆನ್ನದಿರು, ಕಂಡಾ"
(ಬವ. ವ. ೨೭೮)

ಎಂದು ನುಡಿದಿದ್ದಾನೆ. ದಾನ ಕೊಡುವಲ್ಲಿ 'ಅಹಮಿಕೆ' ಇರಕೂಡದು. 'ಶಿವನ ಸೊಮ್ಮು ಶಿವನಿಗೆ ಸಲ್ಲಿತ್ತು' ಎಂಬ ಕಿಂಕಿಲ ಭಾವ ತುಂಬಿರಬೇಕು ದಾನ ಮಾಡುವಲ್ಲಿ. ದಾನ ಮಾಡುವಾಗಲೂ ಸತ್ಪಾತ್ರವರಿತು ದಾನ ಮಾಡಬೇಕು ಎನ್ನುತ್ತಾರೆ ಶರಣರು.

ಬೇಡುವುದನ್ನು ಕುರಿತು ಶರಣರು,

"ಅಡುಗೊಲಿಯು ಮನೆಯುಂತೆ ಗಡಿಗೆಯು ಗಂಜಿಯಾಸೆ ಬೇಡ,
ಕೊಡುವರೆಂದೊಬ್ಬರ ಮನೆಗೆ ಅಡಿಗೆಗೆ ಪೋಗಬೇಡ"

—ಮನಸಂದ ಮಾರಿತಂದೆ(ಸಪ್ರವ–೧. ವ. ೧೩೫೪)

"ಬೇಡಲಾಗದು ಭಕ್ತನು"

—ಬಸವಣ್ಣ (ಬವ. ವ. ೪೪೧)

ಎಂದು ನುಡಿದಿದ್ದಾನೆ. 'ದಾನ'ವನ್ನು ಕೊಡಹೇಳಿದ ಶರಣರು 'ಬೇಡಬಾರ'ದೆಂದು ಏಕೆ ನುಡಿದ್ದಾರೆ ? ಎಂಬುದೊಂದು ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ. ಕೇವಲ ಸ್ವಾರ್ಥದಿಂದ ಉದರ ಪೋಷಣೆಯೊಂದೇ ಗುರಿಯಾದವನಿಗೆ ದಾನಮಾಡಲಾಗ ದೆಂಬುದು ಶರಣರ ನಿಶ್ಚಳ ಅಭಿಪ್ರಾಯ. ಪರಹಿತದ ಗುರಿ ಯೊಂದಿಗೆ ಸ್ವಾರ್ಥವು ಸೇರಿಕೊಂಡಿದ್ದರೆ ದಾನಕೊಡುವುದು ಸಮ್ಮತ ಬೇಡ ಪಡೆದುಕೊಂಡು ಬಂದ ಪದಾರ್ಥದಿಂದ ದುಡಿ ಯಲು ಸಮರ್ಥವಾದ ಇನ್ನೊಂದು ಚೇತನದ ಬಯಕೆಯನ್ನು ಸಲ್ಲಿಸಿ ತಾನೂ ಮತ್ತು ಅದು ಶಿವಚಿಂತನೆಯಲ್ಲಿ ತೊಡುಗುವು ದಾದರೆ 'ಭಿಕ್ಷೆ' (ಬೇಡುವುದು) ಸಾಮಾನ್ಯ ಅರ್ಥದಲ್ಲಿಯ ಭಿಕ್ಷೆ ಯಾಗದು. ಅಂತೇಯೇ ಹಡಪದ ಅಪ್ಪಣ್ಣನು,

"ತಿರಿದುಕೊಂಡು ಬಂದಾದಡೆಯೂ
ನಿಮ್ಮ ಭಕ್ತರಿಗಾನು ಬೆಸಗೆಯ್ವಭಾಗ್ಯವನೆ
ಮಾಡು ಕಂಡಯ್ಯಾ"

—(ವಿಷ, ಪು. ೧೦೪. ವ. ೨೧)

ಎಂದು ನುಡಿದಿದ್ದಾನೆ. ಕೇವಲ ಸ್ವಾರ್ಥಪರವಾದ ಭಿಕ್ಷೆ ಹೀನವಾದದ್ದು, ಪರಹಿತ ಹಾಗೂ ಶಿವಚಿಂತನೆಯನ್ನೊಳಗೊಂಡ 'ಭಿಕ್ಷೆ' ಹೀನವಾದದ್ದಲ್ಲ. ಅದನ್ನೇಕೆ ವೀರಶೈವ ಧರ್ಮದಲ್ಲಿ 'ಕಂತಿಭಿಕ್ಷೆ' ಹಾಗೂ 'ಕೋರಧಾನ್ಯ'. ಭಿಕ್ಷದ ಕಾಯಕಗಳನ್ನು ಇಂದಿಗೂ ಕಾಣುತ್ತೇವೆ. ಭಿಕ್ಷೆಯು ಕಾಯಕವಾದಾಗ ಅಲ್ಲಿ ಕೀಳೆಂಬುದಿಲ್ಲ. ರೊಟ್ಟಿ, ಅನ್ನ ಮುಂತಾದ ಆಹಾರ ಪದಾರ್ಥಗಳ ಭಿಕ್ಷೆಯನ್ನು ಪಡೆದು ಮಠದಲ್ಲಿರುವ ಬಡವಿದ್ಯಾರ್ಥಿಗಳು, ಅಂಗವಿಕಲರು, ಪ್ರವಾಸಿಗರು ಮುಂತಾದವರೊಂದಿಗೆ ಕೂಡಿ ಭುಂಜಿಸುವುದು ಕಂತಿಭಿಕ್ಷದ ಸ್ವರೂಪ. ಆಹಾರ ಧಾನ್ಯಗಳನ್ನು, ಬೇಡಿ ಪಡೆದು ಮಠದಲ್ಲಿಯ ಬಡವಿದ್ಯಾರ್ಥಿಗಳ, ನಿರಾಶ್ರಿತರ ಪ್ರವಾಸಿಗರ ಜೊತೆ ಉಪಭೋಗಿಸುವುದು ಕೋರಧಾನ್ಯ ಭಿಕ್ಷದ ಸ್ವರೂಪ. ಇಂದಿಗೂ ನಾವು ಇವುಗಳು ಪ್ರಚಲಿತವಾಗಿರುವುದನ್ನು ಕಾಣುತ್ತೇವೆ. ಇವು ಸಾಮಾನ್ಯ ಅರ್ಥದಲ್ಲಿರುವ ಭಿಕ್ಷೆಯಲ್ಲ; ಕಾಯಕದ ಸ್ವರೂಪವನ್ನು ಪಡೆದಂಥವುಗಳು.

ಮೇಲೆ ವಿವರಿಸಿದ ಶರಣರ ಎಲ್ಲ ವಿಚಾರಗಳ ಅನುಷ್ಠಾನದಿಂದ ಆರ್ಥಿಕ ಸಮತೆಯನ್ನು ಸಮಾಜದಲ್ಲಿ ಸ್ಥಾಪಿಸಲು ಸಾಧ್ಯ ಆದರೆ ಅವುಗಳನ್ನು ಅನುಷ್ಠಾನದಲ್ಲಿ ತರುವ ಮನಸ್ಸು ಬೇಕಷ್ಟೆ. ಶರಣರು ನಿರೂಪಿಸಿದ ಧಾರ್ಮಿಕ ಅಥವಾ ನೈತಿಕ ಹಿನ್ನೆಲೆಯಿಲ್ಲದೆ ಸಂಪೂರ್ಣ ಆರ್ಥಿಕ ಸಮತೆಯನ್ನು ಸ್ಥಾಪಿಸುತ್ತೇವೆ ಎಂದು ಇಂದಿನ ಸರಕಾರಗಳು ಹೇಳಿದರೆ ಅದು ಕನಸಿನ ಮಾತಾದೀತು.

## ೧೩. ಬಡ್ಡಿ

"ಬಡವೆ ಭಾಂಡಾರ ಕಡವರ ದ್ರವ್ಯವ
ಬಡ್ಡಿ ವ್ಯವಹಾರಮಾಡಿ,
ಮನೆಯಲ್ಲಿ ಹೊಯ್ದುಕೊಂಡಿದ್ದೆನಾದಡೆ.
ಅದು ಎನ್ನ ಅರ್ಥವಲ್ಲ, ಅನರ್ಥವೆಂಬೆ"

—(ಬವ. ವ. ೧೯೪)

"ಹಡೆದೊಡವೆ ವಸ್ತುವನು ಮೃಡಭಕ್ತರಿಗಲ್ಲದೆ
ಕಡಬಡ್ಡಿಯ ಕೊಡಲಾಗದು
ಬಂದಡೊಂದು ಲೇಸು ಬಾರದಿದ್ದಡೆರಡು ಲೇಸು
ಅಲ್ಲಿದ್ದಡೆಯೂ ಲಿಂಗಕ್ಕೆ ಬೋನ, ಇಲ್ಲಿದ್ದಡೆಯೂ
ಲಿಂಗಕ್ಕೆಬೋನ,
ಲಿಂಗದೊಡವೆ ಲಿಂಗಕ್ಕೆ ಸಾರಿತ್ತಾಗಿ
ಬಂದಿತ್ತೆಂಬ ಪರಿಣಾಮವಿಲ್ಲ, ಬಾರದೆಂಬ ದುಃಖವಿಲ್ಲ"

—(ಬವ. ವ. ೨೨೯)

ಬಸವಣ್ಣನ ಮೇಲಿನ ನುಡಿಗಳು ಕಡ ಬಡ್ಡಿಯ ಬಗ್ಗೆ ಶರಣರ ನಿಲವೇನೆಬುಂದನ್ನು ವ್ಯಕ್ತಪಡಿಸುತ್ತವೆ. ಸುಗುಣಗಳಾದ ಶರಣರನ್ನು ಹೊರತು ಪಡಿಸಿ ಧನದಾಸೆಯಿಂದ ಬೇರೆಯವರಿಗೆ ದ್ರವ್ಯವನ್ನು ಕಡವಾಗಿಯಾಗಲಿ, ಬಡ್ಡಿಗಾಗಿಯಾಗಲಿ ಕೊಡಕೂಡದೆಂಬುದು ಶರಣರ ಧೊರಣೆ. ಶಿವಭಕ್ತರಿಗೆ ಹಣದ ಅಗತ್ಯ ಕಂಡು ಬಂದಾಗ, ಸದ್ಭಾವನೆಯಿಂದ ಅವರ ಕಾರ್ಯ

ನೆರವೇರಲು ನಾವು ಧನವನ್ನು ಕೊಡಬೇಕು, ಮರಳಿ ಕೊಡುವ ಚೈತನ್ಯವನ್ನು ಅವರಿಗೆ ಶಿವನು ಕೊಟ್ಟಾಗ ನಮ್ಮ ಹಣ ನಮಗೆ ಮರಳಿ ಬರುತ್ತದೆ. ಒಂದು ವೇಳೆ ಮರಳಿ ಬರದಿದ್ದರೂ ಚಿಂತೆಯಿಲ್ಲವೆಂಬುದು ಶರಣರ ಭಾವ. ಏಕೆಂದರೆ ಆ ಧನವು ತನ್ನ ಘನೋದ್ದೇಶವನ್ನು ಸಾಧಿಸಿಕೊಂಡಿರುತ್ತದೆ. "ಅಲ್ಲಿದ್ದಡೆಯೂ ಲಿಂಗಕ್ಕೆ ಬೋನ; ಇಲ್ಲಿದ್ದಡೆಯೂ ಲಿಂಗಕ್ಕೆ ಬೋನ ಲಿಂಗದೊಡವೆ ಲಿಂಗಕ್ಕೆ ಸಾರಿತ್ತು."

ಬಂಡವಾಳಶಾಹಿ ಪದ್ಧತಿಯ ಬೆಂಬಲಿಗರಿಗೆ ಶರಣರ ಈ ಧೋರಣೆ ಅಗ್ರಾಹ್ಯವಾದುದು. ಸಂಪತ್ತಿನ ವೈಯಕ್ತಿಕ ಸಂಗ್ರಹಣೆಯನ್ನು ವಿರೋಧಿಸುವ ಶರಣರಿಗೆ ಬಡ್ಡಿಯಾಸೆಗಾಗಿ ಧನವನ್ನು ಸಾಲಕೊಡುವುದು ಎಳ್ಳಷ್ಟೂ ಸಮ್ಮತವಿಲ್ಲ. ತನ್ನ ಅಗತ್ಯಗಳನ್ನು ಮೀರಿದ ದ್ರವ್ಯವನ್ನು ಸಮಾಜದ ಅಭ್ಯುದಯಕ್ಕಾಗಿ, 'ಜಂಗಮ ಸಂಸ್ಥೆ'ಗೆ ಸಲ್ಲಿಸುವಾಗ ವ್ಯಕ್ತಿಯ ಹತ್ತಿರ ಬಡ್ಡಿಯೆಾಸೆಗಾಗಿ ಸಾಲವನ್ನು ಕೊಡಲು ಹಣವಾದರೂ ಎಲ್ಲಿರುತ್ತದೆ? ಮೇಲಾಗಿ, ಬಡ್ಡಿಗಾಗಿ ಸಾಲವನ್ನು ಕೊಡುವುದೂ ಶೋಷಣೆಯ ಮೂಲಗಳಲ್ಲೊಂದು ಎಂದು ಶರಣರು ಅರಿತಿದ್ದರು; ಅದರಂತೆ ಆಚರಿಸಿದರು.

## ೧೪. ಬಡತನ

"ಭಾರತವು ಬಡವರಿಂದ ತುಂಬಿದ ಸಿರಿವಂತ ದೇಶ ಎಂಬ ಮಾತೊಂದು ಕೇಳಿ ಬರುತ್ತದೆ. ಭಾರತವು ಬಡದೇಶವೆ ? ಅಥವಾ ಬಡವರ ದೇಶವೆ? ಭಾರತವು ಬಡದೇಶವಲ್ಲ; ಅದು

ಬಡವರ ದೇಶ; ಭಾರತದಲ್ಲಿ ಪ್ರಾಕೃತಿಕ ಸಂಪನ್ಮೂಲಗಳು ಹೇರಳವಾಗಿವೆ. ಆದರೆ ಆ ಪ್ರಾಕೃತಿಕ ಸಂಪತ್ತನ್ನು ಯುಕ್ತ ರೀತಿಯಲ್ಲಿ ಬಳಸಿಕೊಂಡು ವಸ್ತುಗಳ ಉತ್ಪಾದನೆ ಮಾಡುವ ಬುದ್ಧಿ, ಮನಸ್ಸು ವಿರಳವಾಗಿವೆ. ನಮ್ಮ ಮನ ಬುದ್ಧಿಗಳಲ್ಲಿ ಬಡತನವಲ್ಲದೆ ಭೌತಿಕವಾಗಿ, ಪ್ರಾಕೃತಿಕವಾಗಿ ಬಡತನವಿಲ್ಲ. ನಿಷ್ಠೆ ಹಾಗೂ ಪ್ರಾಮಾಣಿಕತೆಗಳಿಂದ ದುಡಿಯುವ ಮನಸ್ಸಿನಲ್ಲಿ ಬಡತನ ಭಾರತದಲ್ಲಿ ನಮ್ಮ ಆಂತರಿಕಗಳಿಂದ ದುಡಿಯುವ ಮನಸ್ಸಿನ ಬಡತನ ಭಾರತದಲ್ಲಿ ನಮ್ಮ ಆಂತರಿಕ ಚೈತನ್ಯಕ್ಕೆ ಬಡತನವಾದಲ್ಲದೆ ನಮಗೆ ಬಡತನವಿಲ್ಲ. ಈ ವಿಷಯ ಕುರಿತು ಶರಣರು,

> "ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ
> ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ
> ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು"
>
> —ಆಯ್ದಕ್ಕಿ ಲಕ್ಕಮ್ಮ (ಶಿಶವ. ಪು. ೩೩೫ ವ. ೯೧)

> "ಭಾಷೆ ತಪ್ಪಿದಲ್ಲದೆ ದಾರಿದ್ರ್ಯವಿಲ್ಲ"
>
> —ಬಸವಣ್ಣ (ಬವ. ವ. ೬೮೯)

> "ಐದು ಇಲ್ಲವಾದಂದಿಗಲ್ಲದೆ, ಜಗಳದೊಳಗಾರಿಗೂ
> ಬಡತನವಿಲ್ಲ"
>
> —ಆಯ್ದಕ್ಕಿ ಲಕ್ಕಮ್ಮ (ಶಿಶವ. ಪು. ೩೩೧ ವ. ೭೭)

> "ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನವುಂಟೆ ?
> ..............................................
> ಘನ ಶಿವಭಕ್ತರಿಗೆ ಬಡತನವಿಲ್ಲ"
>
> —ಆಯ್ದಕ್ಕಿ ಲಕ್ಕಮ್ಮ (ಶಿಶವ. ಪು. ೩೩೦)

ಎಂದು ನುಡಿದಿದ್ದಾರೆ. ನೆಲ, ಜಲ, ಬೆಂಕಿ, ಗಾಳಿ, ಆಕಾಶ ಗಳಿರುವತನಕ ಸಂಪನ್ಮೂಲಗಳ ಕೊರತೆಯಿಲ್ಲ. ಹಾಗೇನೆ ದುಡಿದು ಸಂಪಾದಿಸುತ್ತೇನೆ ಎನ್ನುವ ಭಾವ ಮಾನವನಲ್ಲಿ ಇರು ವವರೆಗೆ ಬಡತನವಿಲ್ಲ. ಸಹಜ ಜೀವಿಯಾಗಿ ನಿಷ್ಠೆಯಿಂದ ಕಾಯಕದಲ್ಲಿ ನಿರತನಾದವನಿಗೆ ಶಿವನೊಲುಮೆಯುಂಟು. ಶಿವ ನಿದ್ದಲ್ಲಿ ಸಂಪತ್ತು ಅಭವನಿರುವನಕ ಅಭಾವವಿಲ್ಲ. ಶಿವಕೃಪೆ ಯಾದವನಿಗೆ ಕೊರತೆಯೆಂಬುದಿಲ್ಲ. ಅಂತೆಯೇ ಬಸವಣ್ಣನು,

"ಹರನೀವ ಕಾಲಕ್ಕೆ ಸಿರಿಯು ಬೆನ್ನಲಿ ಬರ್ಕು,
.....................................
ನೆರೆಯದ ವಸ್ತು ನೆರೆವುದು ನೋಡಯ್ಯಾ"

(ಬವ. ವ. ೧೬೯)

ಎಂದು ನುಡಿದಿದ್ದಾಳೆ. ನಾವು ಶಿವನನ್ನು ಮರೆತರೆ, ಅವನ ಅವಕೃಪೆಗೆ ಪಾತ್ರರಾದರೆ ನಮಗೆ ಬಡತನ, ಇದನ್ನೇ ಆಯ್ದಕ್ಕಿ ಲಕ್ಕಮ್ಮನು,

"ಮಾರಯ್ಯಪ್ರಿಯ ಅಮಲೇಶ್ವರಲಿಂಗವು
ಸತ್ತಂದಿಗಲ್ಲದೆ ಬಡತನವಿಲ್ಲ"

(ಶಿಶವ, ಪು. ೩೩೦, ವ. ೭೬)

ಎಂದು ನುಡಿದಿದ್ದಾಳೆ. ಹೀಗೆ ನಮ್ಮ ಪ್ರಾಮಾಣಿಕ ಪ್ರಯತ್ನ, ಪರಶಿವನ ಒಲುಮೆ ಇವುಗಳಿರುವನಕ ನಮಗೆ ಬಡತನವೆಂಬು ದಿಲ್ಲ.

ದೇಶದಲ್ಲಿಯ ಬಡತನ ತೊಲಗಬೇಕಾದರೆ ಸಾಮುದಾ ಯಿಕ ಅಭ್ಯುದಯದೊಂದಿಗೆ ಸಂಪತ್ತಿನ ಯುಕ್ತಬಳಕೆ ಅವಶ್ಯಕ. ವ್ಯಷ್ಟಿ ಹಾಗೂ ಸಮಷ್ಟಿವಿಕಾಸಗಳು ಒಂದಕ್ಕೊಂದು ಪೂರಕ ಪೋಷಕ,

"ಕಾಗೆ ಒಂದಗುಳ ಕಂಡಡೆ ಕರೆಯದೆ ತನ್ನ ಬಳಗವನು?
ಕೋಳಿ ಒಂದು ಕುಟುಕ ಕಂಡಡೆ ಕೂಗಿ ಕರೆಯದೆ ತನ್ನ
ಕುಲವನೆಲ್ಲವ?"
—ಬಸವಣ್ಣ(ಬವ. ವ. ೪೩೭)

ಎಂದು ಪ್ರಶ್ನಿಸುತ್ತಾನೆ ಬಸವಣ್ಣ. ಕಾಗೆ, ಕೋಳಿಗಳಲ್ಲಿಯ ಸಹಕಾರೀ ಮನೋಭಾವ ಮಾನವರಲ್ಲಿ ಬಂದುದಾದರೆ ಸಾಮುದಾಯಿಕ ಅಭ್ಯುದಯ ಅಸಾಧ್ಯವಾದುದೇನಲ್ಲ. ಈಗಿನ ಸರಕಾರಗಳು ಸಾಮುದಾಯಿಕ ಅಭ್ಯುದಯದ ಯೋಜನೆಗಳನ್ನು ಹಾಕಿಕೊಳ್ಳುವುದನ್ನು ನೋಡಿದಾಗ ಬಸವಣ್ಣ ಎಂಥ ದೂರದೃಷ್ಟಿಯನ್ನು ಹೊಂದಿದ್ದನೆಂಬುದು ಗೋಚರಿಸದಿರದು.

ಹೀಗೆ ಸಾಮುದಾಯಿಕ ಪರಿಶ್ರಮದಿಂದ ಉತ್ಪಾದಿಸಿದ ಸಂಪತ್ತನ್ನು ಯುಕ್ತರೀತಿಯಲ್ಲಿ ಬಳಸಿ ಮತ್ತೆ ಸಮಾಜವಿಕಾಸಕ್ಕೆ ದಾರಿಮಾಡಿಕೊಡಬೇಕು. ದೇವಾಲಯ ನಿರ್ಮಾಣ, ಹರಕೆ ನೇಮ, ತೀರ್ಥಾಟನ ಮುಂತಾದ ಧಾರ್ಮಿಕ ಚಟುವಟಿಕೆಗಳ ಹೆಸರಿನಲ್ಲಿ ನಡೆಯುವ ಅನುತ್ಪಾದಕ ಚಟುವಟಿಕೆಗಳಿಗೆ ಸಮಾಜದ ಸಂಪತ್ತು ವ್ಯಯವಾಗಬಾರದೆಂದು ಶರಣರು,

"ದೇಹದೊಳಗೆ ದೇವಾಲಯವಿದ್ದು,
ಮತ್ತೆ ಬೇರೆ ದೇವಾಲಯವೇಕೆ?"
—ಅಲ್ಲಮಪ್ರಭು (ಅವಚ. ವ. ೨೧೩)

"ಕಾಯವ ದೇಗುಲವಾಗಿ
ಕುರುಹಿಟ್ಟು ಕೊಟ್ಟ ಕುರುಹೆ ದೇವರಾಗಿ"
—ಶಿವಲೆಂಕ ಮಂಚಣ್ಣ (ಸಪುವ. ೧. ವ. ೭೯೪)

"ಹತ್ತು ಮತ್ತರ ಭೂಮಿ, ಭತ್ತದ ಹಯನು,
ನಂದಾದೀವಿಗೆಯು
ನಡೆಸಿಹೆವೆಂಬವರ ಮುಖವ ನೋಡಲಾಗದು,
ಅವರ ನುಡಿಯು ಕೇಳಲಾಗದು"

—ಬಸವಣ್ಣ (ಬವ. ವ. ೨೨೫)

"ಹರಸಿ ಮಾಡುವುದು ಹರಕೆಯ ದಂಡ,
ನೆರಹಿ ಮಾಡುವುದು ಡಂಬಿನ ಭಕ್ತಿ"

—ಬಸವಣ್ಣ (ಬವ. ವ. ೨೨೮)

"ಹಾಲನೇಮವ ಹಿಡಿದಾತ ಬೆಕ್ಕಾಗಿ ಹುಟ್ಟುವ,
ಕಡಲೆಯ ನೇಮವ ಹಿಡಿದಾತ ಕುದುರೆಯಾಗಿ ಹುಟ್ಟುವ,

—ಅಲ್ಲಮಪ್ರಭು (ಅವಚ. ವ. ೧೨೦)

"ಈಶ್ವರನ ಕಾಬುದೊಂದಾಸೆಯುಳ್ಳಡೆ
ಪರದೇಶಕ್ಕೆ ಹೋಗಿ ಬಳಲದಿರು,
ಕಾಶಿಯಲ್ಲಿ ಕಾಯುವ ವಿನಾಶವ ಮಾಡಲು ಬೇಡ,
ನಿನ್ನಲ್ಲಿ ನೀ ತಿಳಿದು ನೋಡಾ,"

—ಅಂಬಿಗರ ಚವುಡಯ್ಯ (ಸಪುವ-೧. ವ. ೧೫೨೧)

ಎಂದು ನುಡಿದಿದ್ದಾರೆ.

ತಮ್ಮ ಸಂಪಾದನೆಯನ್ನು ತಾವೂ ಭೋಗಿಸದೆ, ಸಮಾಜ ವಿಕಾಸಕ್ಕೂ ವಿನಿಯೋಗಿಸದೆ, ಅದು ನಿರರ್ಥಕ ನಿಧಿಯಾಗುವಂತೆ ಹೂಳಿಡುವ ಅಲ್ಪಮತಿಗಳನ್ನು ಕುರಿತು ಬಸವಣ್ಣನು,

"ಆಯುಷ್ಯವುಂಟು ಪ್ರಳಯವಿಲ್ಲೆಂದು ಅರ್ಥವ
ಮಡುಗುವಿರಿ :

ಆಯುಷ್ಯವು ತೀರಿ ಪ್ರಳಯ ಬಂದಡೆ ಅರ್ಥವ
ನಂಬುವರಿಲ್ಲ,
ನೆಲಸನಗೆದು ಮಾಡುಗದಿರಾ–ನೆಲ ನುಂಗಿದಡುಗುಳವುದೆ?
ಕಣ್ಣಿನಲ್ಲಿ ನೋಡಿ, ಮಣ್ಣಿನಲ್ಲಿ ನೆರಹಿ, ಉಣ್ಣದೆ
ಹೋಗದಿರಾ
..................................
ಹೆರರಿಗಿಕ್ಕಿ ಹೆಗ್ಗುರಿಯಾಗಿ ಕೆಡಬೇಡ,
ಕೂಡಲಸಂಗನ ಶರಣರಿಗೆ ಒಡನೆ ಸವೆಸುವುದು"
(ಬವ. ವ. ೨೦೧)

ಎಂದು ಎಚ್ಚರಿಸಿದ್ದಾನೆ. ನಮ್ಮ ಸಂಪತ್ತು ನಿರರ್ಥಕನಿಧಿಯಾಗದೆ ಸಮಷ್ಟಿಯ ಅಭ್ಯುದಯಕ್ಕೆ ಸಹಾಯಕಾರಿಯಾಗಬೇಕೆಂಬುದೆ ಶರಣರ ಬಯಕೆ, ವ್ಯಷ್ಟಿಯಿಂದ ಸಮಷ್ಟಿ ಸಮಷ್ಟಿಯಿಂದ ವ್ಯಷ್ಟಿ.

## ೧೫. ಧರ್ಮದರ್ಶಿತ್ವ

"ಇಳೆ ನಿಮ್ಮದಾನ, ಬೆಳೆ ನಿಮ್ಮದಾನ,
ಸುಳಿದು ಬೀಸುವ ವಾಯು ನಿಮ್ಮ ದಾನ"
—ದೇವರ ದಾಸಮಯ್ಯ (ಸಪುವ–೧ ವ. ೯೫೫)

"ಶಿವನೊಡವೆಯ ಶಿವನವರಿಗೆ ಕೊಡು ಮರುಳೆ
ಅರ್ಥದಲ್ಲೇನೂ ಸುಖವಿಲ್ಲ"
—ಸ್ವತಂತ್ರ ಸಿದ್ಧಲಿಂಗೇಶ್ವರ (ಸ್ವಸಿಕೃ. ವ. ೨೨)

"ನಮ್ಮ ಕೂಡಲಸಂಗನ ಶರಣರು ಬಂದಡೆ
ಒಡೆಯರಿಗೊಡವೆಯನೊಪ್ಪಿಸುವುದೇ ನೇಮ"
—ಬಸವಣ್ಣ (ಬವ. ವ. ೨೩೧)

"ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದು
ಕ್ರೀಯ ಮಾಡೆನು
ನಿಮ್ಮ ಸೊಮ್ಮಿಂಗೆ ಸವೆಸುವೆನು"
—ಬಸವಣ್ಣ (ಬವ. ವ. ೭೦೮)

ಶರಣರ ಈ ನುಡಿಗಳಲ್ಲಿ 'ನಾವು ವಾಸಿಸುವ ಭೂಮಿ, ಸೇವಿಸುವ ಗಾಳಿ, ಭೋಗಿಸುವ ಅನ್ನ... ಎಲ್ಲವೂ ಶಿವನ ಪ್ರಸಾದ' ಎಂಬ ಭಾವನೆಯನ್ನು ಕಾಣುತ್ತೇವೆ. ನಾವು ಸಂಪಾದಿಸುವ ದ್ರವ್ಯ, ಶಿವನ ದ್ರವ್ಯ. ನಾವು ಅವರ ಧರ್ಮದರ್ಶಿಗಳು ಮಾತ್ರ ಶಿವನ ಸೊಮ್ಮಿನ ರಕ್ಷಕರು ನಾವು. ಭಾರತದ ಪಿತಾಮಹನಾದ ಗಾಂಧೀಜಿಯವರು ಸಹ ಇದೇ ಅಭಿಪ್ರಾಯವನ್ನು ತಮ್ಮ ಕೃತಿಗಳಲ್ಲಿ ವ್ಯಕ್ತಪಡಿಸಿದ್ದಾರೆ.

## ಕೊನೆಯ ಮಾತು

ಭಾರತೀಯ ಸಂತರು, ಶರಣರು, ಮಹಾನುಭಾವರನ್ನು ಕುರಿತು ವಿವೇಚನೆ ಮಾಡುವಾಗ ಕೆಲವು ನಮ್ಮ ಹಾಗೂ ಪಾಶ್ಚಾತ್ಯ ವಿದ್ವಾಂಸರು ಅವರೆಲ್ಲ ಲೌಕಿಕಕ್ಕೆ ಮಹತ್ವ ಕೊಡದೆ ಕೇವಲ ಪಾರಮಾರ್ಥವೊಂದನ್ನೇ ಚಿಂತಿಸಿದವರೆಂಬ ಶಂಕೆ, ಸಂಶಯಗಳನ್ನು ವ್ಯಕ್ತಪಡಿಸಿದ್ದಾರೆ. ಇನ್ನುಳಿದ ಭಾರತೀಯ ಸಂತರ ವಿಚಾರವಾಗಿ ನಾವು ಏನನ್ನೂ ಹೇಳಬಯಸದೇ ಕನ್ನಡ ನಾಡಿನ ಶಿವಶರಣರು ಮಾತ್ರ ಇಹಲೋಕದಬದುಕಿಗೆ ಲೇಸನ್ನು ತರುವುದಕ್ಕೆ ತ್ರಿಕರಣ ಪೂರ್ವಕವಾಗಿ ಸಾಧನೆಮಾಡಿದ್ದಾರೆಂದು ಆತ್ಮವಿಶ್ವಾಸದಿಂದ ಹೇಳಬಲ್ಲೆ. ಏಕೆಂದರೆ ಶರಣರು

ಇನ್ನೊಂದು ಲೋಕವನ್ನೇ ನಂಬಿದವರಲ್ಲ. ಅವರ ಜೀವನದ ಸಮೃದ್ಧಿ, ವಿಕಾಸ, ಶಾಂತಿಗಳೊಡನೆ ತಮ್ಮ ಸಮೃದ್ಧಿ, ವಿಕಾಸ, ಶಾಂತಿಗಳನ್ನು ಒಂದಾಗಿ ಬೆಸೆದುಕೊಂಡಿದ್ದ ಮಾನವೀಯತೆ ಅವರದು. ಆದುದರಿಂದಲೇ ಶರಣರು ಸಮಾಜದ ಹಿತಚಿಂತನೆ ಮಾಡುವಾಗ ಬದುಕಿನ ಬುನಾದಿಯಾದ ದುಡಿಮೆ, ಅರ್ಥಸಂಪಾದನೆ, ಬಳಕೆ. ಸಮುದಾಯ ಹಿತ ಇತ್ಯಾದಿಗಳನ್ನು ಕುರಿತಾ ಕೂಲಂಕಷವಾಗಿ ವಿವೇಚನೆ ಮಾಡಲಿಲ್ಲವೆಂದು ತಿಳಿಯುವುದು ಅವಾಸ್ತವಿಕವಾಗುತ್ತದೆ. ಶರಣರ ಈ ವಿಚಾರಗಳು ಕೇವಲ ಲೌಕಿಕ ಸೂತ್ರಗಳಾಗಿರದೆ ಆಧ್ಯಾತ್ಮಿಕವನ್ನೊಳಗೊಂಡ ಬಗೆಯು ವೆಂಬುದನ್ನು ಓದುಗರು ಅವಶ್ಯವಾಗಿ ಗಮನಿಸಬೇಕಾಗುತ್ತದೆ.

ಮೇಲೆ ವಿವೇಚಿಸಿರುವ ಶರಣರ ಆರ್ಥಿಕ ವಿಚಾರಗಳು ಇಂದಿನ ಕಾಲವಲ್ಲಿ ಅನ್ವಯಕ್ಕೆ ಕಠಿಣವೆಂದು ಕಂಡುಬರಬಹುದು. ಏಕೆಂದರೆ ನಮ್ಮ ಆರ್ಥಿಕ ವಿಚಾರಗಳು ಕೇವಲ ಲೌಕಿಕವನ್ನೇ ದೃಷ್ಟಿಯಲ್ಲಿಟ್ಟುಕೊಂಡು, ಆಮದು ಮಾಡಿಕೊಂಡಿರುವ ಪಾಶ್ಚಾತ್ಯ ಅರ್ಥಶಾಸ್ತ್ರಜ್ಞರ ಕಲ್ಪನೆಗಳು. ಒಟ್ಟಾರೆ ಜನಮನವನ್ನು, ಜನಮತವನ್ನು ಶರಣರ ಸಾತ್ವಿಕ ನೈತಿಕ, ಆರ್ಥಿಕ ಕಲ್ಪನೆಗಳ ಕಡೆಗೆ ಹೊರಳಿಸಲಾರದೆ ಕೇವಲ ಆಧುನಿಕ ಆರ್ಥಿಕ ಕಲ್ಪನೆಗಳಿಂದ ಪರಿಪೂರ್ಣಜೀವನವನ್ನು ಕಟ್ಟಿನಿಲ್ಲಿಸಲು ಸಾಧ್ಯವಾಗದೆಂಬುದನ್ನು ಒಪ್ಪಬೇಕಾಗುತ್ತದೆ. ಇತ್ತೀಚಿನ ಪಾಶ್ಚಾತ್ಯ ಅರ್ಥಶಾಸ್ತ್ರಜ್ಞರು ಸಹ ಇಂದಿನ ಆರ್ಥಿಕ ಬಿಕ್ಕಟ್ಟಿನ ತೀಕ್ಷ್ಣತೆಯನ್ನು ಅನುಭವಿಸಿ ಸಾತ್ವಿಕ ಆರ್ಥಿಕ ಕಲ್ಪನೆಗಳ ಕಡೆಗೇ ಹೊರಳುತ್ತಿರುವುದನ್ನು ನಾವು ಕಾಣುತ್ತಿದ್ದೇವೆ.

— ೦ —

# ಗ್ರಂಥ ಋಣ

## ಕನ್ನಡ

೧. ಅಲ್ಲಮನ ವಚನ ಚಂದ್ರಿಕೆ :
ಸಂ. ಎಲ್. ಬಸವರಾಜು (೧೯೬೦)

೨. ಚೆನ್ನಬಸವಣ್ಣನವರ ವಚನಗಳು :
ಸಂ. ಡಾ. ಆರ್. ಸಿ. ಹಿರೇಮಠ (೧೯೬೫)

೩. ಬಸವಣ್ಣನವರ ವಚನಗಳು :
,, (೧೯೬೮)

೪. ಮಹಾದೇವಿಯಕ್ಕನ ವಚನಗಳು :
,, (೧೯೬೮)

೫. ವಚನ ಸಾಹಿತ್ಯ ಸಂಗ್ರಹ :
ಸಂ. ಸಂ. ಶಿ. ಭೂಸನೂರಮಠ (೧೯೬೫)

೬. ವಿಶೇಷಾನುಭವ ಷಟಸ್ಥಲ :
ಸಂ. ಡಾ. ಆರ್. ಸಿ. ಹಿರೇಮಠ (೧೯೭೧)

೭. ಶಿವಶರಣೆಯರ ವಚನಗಳು :
(ಸಮಗ್ರ ಸಂಪುಟ) ,, (೧೯೬೮)

೮. ಶ್ರೀ ಸಿದ್ಧರಾಮೇಶ್ವರ ವಚನಗಳು :
,, (೧೯೬೮)

೯. ಸಕಲ ಪುರಾತನರ ವಚನಗಳು–೧ :
,, (೧೯೭೨)

೧೦. ಸಕಲ ಪುರಾತನರ ವಚನಗಳು–೨ :
ಸಂ. ಡಾ. ಎಂ. ಎಸ್. ಸುಂಕಾಪುರ (೧೯೭೬)
೧೧. ಸ್ವತಂತ್ರ ಸಿದ್ಧಲಿಂಗೇಶ್ವರ ಕೃತಿಗಳು :
ಸಂ. ಡಾ. ಹೆಚ್. ಪಿ. ಮಲ್ಲೆದೇವರು (೧೯೭೫)
೧೨. ಶೂನ್ಯ ಸಂಪಾದನೆ :
ಸಂ. ಸಂ. ಶಿ. ಭೂಸನೂರಮಠ (೧೯೬೫)
(ದ್ವಿತಿಯ ಮುದ್ರಣ)

**ಇಂಗ್ಲೀಷ**

1. A Sociology of Religion :
Michael Hill (1973)
2. Caste, class and occupation ;
G. S. Ghurye (1961)
3. Dictionary of Modern Economics ;
Douglass Greenwald & Associates
(2nd Ed).1973
4. Principles of Economics: A Marshall(8th Ed)
5. Small is Beautiful : Schumacheur
6. Sociological Bulletion :
Vol. 26, No 2 Sept. 1977
7. Values and Economic Development :
Dr. V. K. R. V. Rao

# ಉಪನ್ಯಾಸ ಗ್ರಂಥ ಮಾಲೆಯ ಕೆಲವು
# ಉಪಯುಕ್ತ ಪುಸ್ತಕಗಳು

೧. ಹರಿಹರನು ಚಿತ್ರಿಸಿದ ಶಿವಶರಣೆಯರು
—ಬಿ. ಬಿ. ಹೆ

೨. ಅಕ್ಕ ಮಹಾದೇವಿ ಮತ್ತು ಮೀರಾಬಾಯಿ
—ಎಸ್. ಎಸ್. ಕಬ್ಬ

೩. ಸಗರನಾಡಿನ ಶಿವಶರಣೆಯರು —ವ್ಹಿ. ಶಿವಾನಂದ

೪. ಬಸವಣ್ಣನವರು ಕಟ್ಟಬಯಸಿದ ಸಮಾಜ
—ಸಂಗಣ್ಣ ಕುಪ್ಪ

೫. ಬಸವಣ್ಣನವರ ಧ್ಯೇಯಾದರ್ಶಗಳಿಗೆ ಸಮಕಾಲೀನರ ಕೊಡುಗೆ
—ಎಸ್. ಜಿ. ಹ

೬. ಶಿವ ಶರಣರ ಸಮನ್ವಯಯೋಗ
—ಸಂ. ನಾ. ಮ. ದೊಡ್ಡಶಾ

೭. ನಿಜಗುಣಶಿವಯೋಗಿಗಳ ಭಕ್ತಿ, ಜ್ಞಾನ, ವೈರಾಗ್ಯ
—ಪಿ. ಎಂ.ಸಿದ್ಧಯ

೮. ಶರಣರ ಕಾಯಕ ತತ್ವ —ಎಂ. ಪಿ. ಎಂ. ಶಾಂತವೀರಯ

೯. ಮೈಲಾರ ಬಸವಲಿಂಗ ಶರಣರು
—ದೇವೇಂದ್ರಕುಮಾರ ಹಕಾ

೧೦. ಶರಣ ಸಾಹಿತ್ಯ —ಬಿ. ಎಸ್. ಗೊರ

---


ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ